


# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ

ಸಂಪುಟ ೨೪ । ಸಂಚಿಕೆ ೦೬ । ರೂ. ೧೫/- ಜನವರಿ - ೨೦೨೨

ಪ್ರಕಾಶಕರು
ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

# ಮಹಾಮನೆ

ಸಂಪುಟ ೨೪ : ಸಂಚಿಕೆ ೦೬ ಜನವರಿ - ೨೦೨೨

ಸಂಪಾದಕರು

**ಡಾ. ಎಂ.ಎಸ್. ಆಶಾದೇವಿ**



ಪ್ರಕಾಶಕರು

**ಗೊ.ರು. ಚನ್ನಬಸಪ್ಪ**

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

ಮೈಸೂರು



ಸಂಸ್ಥಾಪಕರು

ಶ್ರೀಮನ್ಮಹಾರಾಜ ರಾಜಗುರುತಿಲಕ ಪರಮಪೂಜ್ಯ

ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು

ಗೌರವಾಧ್ಯಕ್ಷರು

ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು

ಜಗದ್ಗುರು ಡಾ. ಶ್ರೀ ತೋಂಟದ ಸಿದ್ಧರಾಮ ಮಹಾಸ್ವಾಮಿಗಳವರು

ಅಧ್ಯಕ್ಷರು

ಪ್ರೊ. ಮಲೆಯೂರು ಗುರುಸ್ವಾಮಿ

ಸಂಪಾದಕ ಮಂಡಳಿ

ಡಾ. ಓ.ಎಲ್. ನಾಗಭೂಷಣಸ್ವಾಮಿ

ಪ್ರೊ. ಎಸ್.ಜಿ. ಸಿದ್ಧರಾಮಯ್ಯ

ಡಾ. ಶಿವಗಂಗಾ ರುಮ್ಮಾ

ಮುಖಪುಟ ವಿನ್ಯಾಸ

ನಟರಾಜ್ ಎಸ್.ಎಲ್.

**ಆಡಳಿತ ಕಾರ್ಯಾಲಯ**

ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯರಸ್ತೆ, ಜಯನಗರ ೮ನೆಯ ವಿಭಾಗ

ಬೆಂಗಳೂರು - ೫೬೦ ೦೭೦, ದೂ: ೦೮೦ - ೨೬೯೭ ೦೧೨೫

E-mail: mahamanemagazine@gmail.com



## ಸಂಚಿಕೆಯ ಅಂತರಂಗ

ಬಿನ್ನಹ ...... 

# ಅನುಗಾಲವೂ ಹೊಸಕಾಲ

ಭಾರತೀಯ ಮನಸ್ಸು ಕಾಲವನ್ನು ಪ್ರಕೃತಿಯ ಜೊತೆಯಲ್ಲಿ ಹೊಂದಿಸಿಕೊಂಡಿದೆ. ಋತುಮಾನಗಳು ಕಾಲದ ಮಾನದಂಡಗಳೆನ್ನುವುದನ್ನು ಪ್ರತಿಪಾದಿಸಲಾಗುತ್ತದೆ. ಋತುಗಳನ್ನು ಮಾನದಂಡಗಳೆಂದು ಕರೆಯುವುದೂ ಆಧುನಿಕವಾದ ಪರಿಕಲ್ಪನೆ. ಬದಲಿಗೆ ನಿತ್ಯನೂತನವಾದ ಪ್ರಕೃತಿಯ ಚೆಲುವನ್ನು ಬದಲಾವಣೆಯ ರೂಪಕಗಳೆಂದು ಸೌಂದರ್ಯಶೀಲ ಮನಸ್ಸು ಆಸ್ವಾದಿಸುತ್ತದೆ. ಖಚಿತವಾದ ವರ್ಷ ಮತ್ತು ದಿನಾಂಕಗಳಿಗಿಂತ ಬದಲಾವಣೆಯನ್ನು ಚೆಲುವಿನ ಮೂಲಕವೇ ಚಿತ್ರಿಸುವ ಸೌಂದರ್ಯಾತ್ಮಕ ದೃಷ್ಟಿಕೋನವೇ ಹೆಚ್ಚು ಪ್ರತಿಭಾಶೀಲವಾಗಿ ಕಾಣಿಸುತ್ತದೆ. ಹಾಗೆಂದು ಸಾಂಪ್ರದಾಯಿಕತೆಯನ್ನು ಪ್ರತಿಪಾದಿಸುವ ನಿಲುವು ಇದೆಂದು ಖಂಡಿತ ತಿಳಿಯಬೇಕಿಲ್ಲ. ದೃಷ್ಟಿಕೋನಗಳ ಭಿನ್ನತೆಯನ್ನು ಗುರುತಿಸುವ ದೃಷ್ಟಿಯಿಂದ ಮಾತ್ರ ಇದನ್ನು ಹೇಳುತ್ತಿದ್ದೇನೆ.

ಜೀವಪರವಾದ ಮನಸ್ಸಿಗೆ 'ನಿತ್ಯಕ್ಕೊಮ್ಮೆ ಜನನ' ಋತುಮಾನಗಳ ಹೊಸಕಾಲವನ್ನು, ಆಧುನಿಕತೆಯ ಹೊಸಕಾಲದ ಪರಿಕಲ್ಪನೆ ಎರಡನ್ನೂ ಒಪ್ಪೋಣ, ಬದುಕನ್ನು ಸಂಭ್ರಮಿಸೋಣ.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿಗೆ ಹೊಸ ವರ್ಷದಲ್ಲಿ ಹೊಸ ಅಧ್ಯಕ್ಷರ ಆಗಮನವಾಗಿರುವುದು ಕಾಕತಾಳೀಯವೇ ಇದ್ದಿರಬಹುದಾದರೂ, ಪ್ರೊ. ಮಲೆಯೂರು ಗುರುಸ್ವಾಮಿಯವರಿಗೆ ಸಮಸ್ತ ಶರಣ ಬಳಗದ ಪರವಾಗಿ ಹೃತ್ಪೂರ್ವಕ ಸ್ವಾಗತ. ಶರಣ ಸಾಹಿತ್ಯ ಪರಿಷತ್ತನ್ನು ಅವರು ಹೊಸದಿಕ್ಕಿನತ್ತ ಕರೆದೊಯ್ಯುವರೆಂದು, ಕ್ರಿಯಾಶೀಲವಾಗಿ, ಬಹುಮುಖವಾಗಿ ಇದನ್ನು ಬೆಳೆಸುವರು ಎನ್ನುವುದು ಎಲ್ಲರ ನಿರೀಕ್ಷೆ. ಕನ್ನಡಕ್ಕೆ ಕೆಲವು ಕುತೂಹಲಕರವಾದ ಮತ್ತು ಮಹತ್ತ್ವದ ಕೃತಿಗಳನ್ನು ಪ್ರೊ. ಮಲೆಯೂರು ಗುರುಸ್ವಾಮಿ ಅವರು ಕೊಟ್ಟಿದ್ದಾರೆ. 'ಕಪಿಲೆ ಹರಿದಳು ಕಡಲಿಗೆ' ಕನ್ನಡದ ಯುಗಪ್ರತಿಭೆ ಬೆಂಗಳೂರು ನಾಗರತ್ನಮ್ಮನವರನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ ಕೃತಿಯಾಗಿದೆ. ಮಹಾಯಾತ್ರಿಕ, ಅಪ್ರತಿಮ ವೀರ, ಚರಿತ್ರೆಯ ಪುಟಕ್ಕೆ ಒಂದು ಟಿಪ್ಪಣಿ, ಸಂಸ, ಬಂಗಾರದೊಡ್ಡಿ ಇವರು ಇವರ ಇತರ ಕೃತಿಗಳು. ವಿಶ್ರಾಂತ ಕನ್ನಡ ಪ್ರಾಧ್ಯಾಪಕರಾಗಿರುವ ಇವರು ಪ್ರಸ್ತುತ 'ಪ್ರಸಾದ' ದ್ವೈಮಾಸಿಕ ಪತ್ರಿಕೆಯ ಸಂಪಾದಕರೂ ಆಗಿದ್ದಾರೆ.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿ ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟದ ಕಲಾವಿದ ಶ್ರೀ ನಟರಾಜ ಎಸ್.ಎಲ್. ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಎಂ.ಎಸ್. ಆಶಾದೇವಿ**





# ಶರಣರು ಮತ್ತು ದಲಿತಪ್ರಜ್ಞೆ

**ಡಾ. ಜಿ.ಎಸ್. ಶಿವರುದ್ರಪ್ಪ**

ದಲಿತ ಎಂದರೆ ಮೇಲಿನ ವರ್ಗದವರಿಂದ ತುಳಿತಕ್ಕೆ ಅಥವಾ ಶೋಷಣೆಗೆ ಒಳಗಾದವರು; ಅಕ್ಷರಜ್ಞಾನದ ಸವಲತ್ತುಗಳಿಂದ ವಂಚಿತರಾದವರು; ಸಾಮಾಜಿಕವಾದ ಸ್ಥಾನಮಾನಗಳಿಂದ ನಿರಾಕರಿಸಲ್ಪಟ್ಟವರು; ಅಮಾನವೀಯವಾದ ರೀತಿಯಲ್ಲಿ ಮಾನಸಿಕ ಹಿಂಸೆಗೆ ಒಳಗಾದವರು. ಇವರು ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲದಲ್ಲಿಯೂ ಇದ್ದವರು ಮತ್ತು ಈಗಲೂ ಇರುವವರು. ಆದರೆ, ಈ ದಲಿತ ವರ್ಗ ಹಿಂದೆ ಇದ್ದ ಆ ಸ್ಥಿತಿಯನ್ನು ಕೊಂಚಮಟ್ಟಿಗೆ ದಾಟಿ ಹೊಸ ಎಚ್ಚರಗಳಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ ಮತ್ತು ಸ್ವಾಭಿಮಾನದಿಂದ ಶೋಷಕ ಶಕ್ತಿಗಳ ವಿರುದ್ಧವಾಗಿ ಪ್ರತಿಭಟಿಸಿ ನಿಲ್ಲಬಲ್ಲವರಾಗಿದ್ದಾರೆ ಎನ್ನುವುದು ಚಾರಿತ್ರಿಕವಾಗಿ ಬಹುಮುಖ್ಯವಾದ ಸಂಗತಿಯಾಗಿದೆ. ಅವರ ಈ ಎಚ್ಚರಕ್ಕೆ ಹಿನ್ನೆಲೆಯಾಗಿ ಜಗತ್ತಿನ ಚರಿತ್ರೆಯಲ್ಲಿ ಅನೇಕ ಬಗೆಯ ಸಾಮಾಜಿಕ ಹಾಗೂ ರಾಜಕೀಯ ಆಂದೋಲನಗಳನ್ನು ಕಾಣಬಹುದಾದರೂ, ಈ ವರ್ಗಕ್ಕೆ ಒಂದು ಆತ್ಮಪ್ರತ್ಯಯವನ್ನೂ, ಪ್ರತಿಭಟನೆಯ ದನಿಯನ್ನೂ, ಸಮಾನತೆಯ ನೆಲೆಯನ್ನೂ ಹನ್ನೆರಡನೆಯ ಶತಮಾನದಷ್ಟು ಹಿಂದೆಯೇ ಕರ್ನಾಟಕದಲ್ಲಿ ನಡೆದ ಶರಣ ಚಳುವಳಿ ಗಳಿಸಿಕೊಟ್ಟಿತೆಂಬುದು ತುಂಬ ಮಹತ್ವದ ಘಟನೆಯಾಗಿದೆ.

ವಾಸ್ತವವಾಗಿ ನಾವು ಯಾವುದನ್ನು ಶರಣ ಚಳುವಳಿ ಎಂದು ಕರೆಯುತ್ತೇವೆಯೋ ಅದು, ಭಾರತದ ಮೊಟ್ಟ ಮೊದಲ ಜನತಾ ಚಳುವಳಿ. ಈ ಚಳುವಳಿಯಲ್ಲಿ ಪಾಲುಗೊಂಡವರು ಕನ್ನಡನಾಡಿನ ಶ್ರೀಸಾಮಾನ್ಯರು; ಅದರಲ್ಲಿಯೂ ಕೃಷಿಕರು ಮತ್ತು ಕಸುಬುದಾರರು ಮತ್ತು ಈ ಬಹುಮಟ್ಟಿನ ಅನಕ್ಷರಸ್ಥರನ್ನು, ಈ ಚಳುವಳಿಯೊಳಕ್ಕೆ ಸಂಘಟಿಸಿದವರು, ಅದೇ ಸಮಾಜದ ಮೇಲು ವರ್ಗದಿಂದ ಬಂದ ಬಸವಣ್ಣನವರು. ಅಲ್ಲದೆ ಈ ಚಳುವಳಿ, ಮೂಲಭೂತವಾಗಿ ಸಾಮಾಜಿಕ–ಧಾರ್ಮಿಕ ಸ್ವರೂಪದ್ದು. ಯಾವ ಒಂದು ಧಾರ್ಮಿಕ ನಿಲುವು, ವರ್ಣ ವರ್ಗಗಳ ತರತಮಗಳನ್ನು ನಿರಾಕರಿಸಿ, ಶರಣರಾಗಿರುವುದು ಅಥವಾ ಶಿವಭಕ್ತನಾಗಿರುವುದು ಎಲ್ಲಕ್ಕಿಂತ ಮಹತ್ತ್ವದ್ದು ಎಂಬುದನ್ನು ಪ್ರತಿಪಾದಿಸಿತೋ ಆ ನೆಲೆಯಲ್ಲಿ ಅಂದಿನ ಸಮಾಜ ತನ್ನೆಲ್ಲ ಕೀಳರಿಮೆಗಳಿಂದ, ಭಯಗಳಿಂದ, ಅವೈಚಾರಿಕತೆಗಳಿಂದ

ಬಿಡುಗಡೆಯನ್ನು ಪಡೆದುಕೊಂಡಿತು. ಈ ಬಿಡುಗಡೆಯಲ್ಲಿ ಪಾಲುಗೊಂಡವರಲ್ಲಿ ಸಮಾಜದ ಮೇಲ್‌ಸ್ತರದವರ ಜತೆಗೆ, ಅದರ ಕೆಳಗಿನ ಸ್ತರದವರು ಅಥವಾ ಇವತ್ತಿನ ಪರಿಭಾಷೆಯಲ್ಲಿ ಹೇಳುವುದಾದರೆ ದಲಿತರೂ ಇದ್ದಾರೆ.

ಯಾವ ಸಾಮಾಜಿಕ ಸಂದರ್ಭದಲ್ಲಿ ಶರಣ ಚಳುವಳಿ ನಡೆಯಿತೋ ಆ ಸಮಾಜ ಮೂಲಭೂತವಾಗಿ ಸ್ಥಗಿತಗೊಂಡ ಅಥವಾ ಸ್ಥಾವರ ಸ್ವರೂಪದ ಸಮಾಜ. ಈ ಸ್ಥಗಿತತೆಗೆ ಕಾರಣ ಬಹುಕಾಲದಿಂದ ಬಂದ ವರ್ಣವ್ಯವಸ್ಥೆಯೇ ಆಗಿದೆ. ಪುರುಷ ಸೂಕ್ತದ ಪ್ರತಿಮೆಯಲ್ಲಿ ಉಕ್ತವಾಗಿರುವ ಸಮಾಜದ ಶ್ರೇಣೀಕರಣದಲ್ಲಿ ಬ್ರಾಹ್ಮನಿಗೆ ಉಚ್ಚಸ್ಥಾನವೂ, ಶೂದ್ರನಿಗೆ ಕನಿಷ್ಠ ಸ್ಥಾನವೂ ನೀಡಲ್ಪಟ್ಟಿದೆ. ಸಮಾಜದ ಮೇಲಿನ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಈ ಮೂರೂ ವರ್ಣಗಳವರು ಸಮಾಜದ ಬಹುಸಂಖ್ಯಾತ ದುಡಿಯುವ ವರ್ಗದವರಾದ ಶೂದ್ರರನ್ನು ವ್ಯವಸ್ಥಿತವಾಗಿ ಶೋಷಣೆಗೆ ಗುರಿಪಡಿಸುತ್ತಲೇ ಬಂದಿದ್ದಾರೆ ಮತ್ತು ನಾಲ್ಕು ವರ್ಣಗಳ ಜೊತೆಗೆ ಐದನೆಯದಾದ 'ಪಂಚನು' ಎಂದು ಕರೆಯಲ್ಪಡುವ ಅಸ್ಪೃಶ್ಯ ಸಮುದಾಯವೊಂದು ನಿರ್ಮಿತವಾಗಿ ಮೇಲಿನ ನಾಲ್ಕು ವರ್ಗಗಳವರಿಂದ ತಿರಸ್ಕಾರಕ್ಕೆ, ಶೋಷಣೆಗೆ ಗುರಿಯಾಗುತ್ತ ಬಂದಿದೆ. ಶೂದ್ರರು ಈ ಶ್ರೇಣೀಕರಣದಲ್ಲಿ 'ಕನಿಷ್ಠ'ರಾದರೆ, ಈ ಪಂಚಮನು ಅಥವಾ ಅಸ್ಪೃಶ್ಯರು ಅಥವಾ ಹೆಸರು ಹೇಳಲೂ ಅನರ್ಹರೆಂಬುದನ್ನು ಸೂಚಿಸುವ 'ಅನಾಮಿಕರು', 'ಕನಿಷ್ಠತಮ'ರೆಂದು ಹೇಳಬಹುದು. ಹೀಗಾಗಿ ಅಂದಿನ ಸಾಮಾಜಿಕ ವ್ಯವಸ್ಥೆ ಎನ್ನುವುದು ಬ್ರಾಹ್ಮಣನ ಶ್ರೇಷ್ಠತ್ವವನ್ನೂ, ಅಸ್ಪೃಶ್ಯನ ಕನಿಷ್ಠತ್ವವನ್ನೂ ನಿರ್ವಿವಾದವಾಗಿ ಉಳಿಸಿಕೊಂಡ ವ್ಯವಸ್ಥೆಯಾಗಿತ್ತು.

ಹೀಗೆ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ' ಉಳ್ಳ ಈ ವ್ಯವಸ್ಥೆಯನ್ನು ಸ್ವಲ್ಪವೂ ಕದಲಿಸದಂತೆ ಕಾಪಾಡಿಕೊಂಡು ಬರುವುದರಲ್ಲಿ ಪ್ರಭುಶಕ್ತಿ ಹಾಗೂ ಪುರೋಹಿತಶಾಹೀ ಪ್ರವೃತ್ತಿಗಳು ತುಂಬ ದಕ್ಷತೆಯಿಂದ ವರ್ತಿಸಿದವು. ರಾಜರು-ಮಹಾಜನಗಳು-ಮಠಗಳು ಎಂಬ ತ್ರಿಕೂಟಗಳು ಈ ವ್ಯವಸ್ಥೆಯ ಮುಖ್ಯ ಶಕ್ತಿಗಳು. ರಾಜರು, ವರ್ಣ ವ್ಯವಸ್ಥೆಯನ್ನು, ಎಂದೂ ಬದಲಿಸದೆ, ಕದಲಿಸದೆ, 'ಮಹಾಜನಗಳಿಗೆ' ಎಂದರೆ ಬ್ರಾಹ್ಮಣರಿಗೆ, ಅವರ ಅಗ್ರಹಾರಗಳಿಗೆ, ಅವರು ಮಾಡುವ ಯಜ್ಞಯಾಗಾದಿಗಳಿಗೆ ಅವರ ಪೌರೋಹಿತ್ಯದಲ್ಲಿದ್ದ ದೇವಸ್ಥಾನಗಳಿಗೆ ದಾನ-ದಕ್ಷಿಣೆ-ದತ್ತಿಗಳನ್ನು ಕೊಟ್ಟು ಅವರ ಆಶೀರ್ವಾದವನ್ನು ಪಡೆಯುತ್ತ, ಶೈವ ಹಾಗೂ ಕಾಳಾ ಮುಖ ಗುರುಗಳು ನಡೆಯಿಸುತ್ತಿದ್ದ ಅನೇಕ ಮಠಗಳಿಗೆ ರಕ್ಷಣೆ ಹಾಗೂ ಗೌರವವನ್ನೂ ಸಲ್ಲಿಸುತ್ತಾ, ಸಮಾಜದ ಇನ್ನಿತರ ವರ್ಣಗಳ ಯಾರ್‍ಯಾರು ಎಲ್ಲೆಲ್ಲಿ ಇರಬೇಕೋ ಅಲ್ಲಲ್ಲಿ ಇರಿಸುತ್ತಾ ಪ್ರಜಾಕ್ಷೇಮ ಚಿಂತನೆಯಲ್ಲಿ ತೊಡಗಿದ್ದರು. ಮಹಾಜನರು ಮತ್ತು ಮಠಗಳು, ಸಮಾಜದ ಇತರ ವರ್ಣಗಳವರನ್ನು ತಮ್ಮ ಲಾಭಕ್ಕೆ, ದುಡಿಮೆಗೆ ಬಳಸಿಕೊಂಡು ತಮ್ಮ ಸುಖವನ್ನು ನೋಡಿಕೊಂಡರು. 'ಸರ್ವೇ ಜನಾಃ ಸುಖಿನೋ ಭವಂತು', 'ಸರ್ವಂ ಖಲ್ವಿದಂ ಬ್ರಹ್ಮಾ' ಎಂಬ ಮಂತ್ರಗಳನ್ನು ಹೇಳುತ್ತಾ, ಸಾಮಾಜಿಕ





ತರತಮಗಳನ್ನು ಯಥಾಸ್ಥಿತಿಯಲ್ಲಿರಿಸುವ ತಂತ್ರ ಅವ್ಯಾಹತವಾಗಿ ಈ ಸ್ಥಾವರ ಸಾಮಾಜಿಕ ಚೌಕಟ್ಟಿನಲ್ಲಿ ವ್ಯವಸ್ಥಿತವಾಗಿ ಮುಂದುವರಿದಿತ್ತು.

ಶರಣ ಚಳುವಳಿಯ ಕೇಂದ್ರವ್ಯಕ್ತಿಯಾದ ಬಸವಣ್ಣನವರು ಹುಟ್ಟಿದ್ದು ಇಂಥ ಸ್ಥಾವರ ಸಾಮಾಜಿಕ ವ್ಯವಸ್ಥೆಯಲ್ಲಿ. ಈ ವ್ಯವಸ್ಥೆಯನ್ನು ಕಂಡು ಕಸಿವಿಸಿಗೊಂಡ ಅವರು ಅದನ್ನು ಬದಲಿಸಲು, ಸ್ಫೋಟಕ ಸಾಮಗ್ರಿಯನ್ನಾಗಿ ಬಳಸಿಕೊಂಡದ್ದು ಅಂದಿನ ವರ್ಣವ್ಯವಸ್ಥೆಯ ನಾಲ್ಕು ಐದನೆಯ ಹಂತದ ಜನಶಕ್ತಿಯನ್ನು, ಅಂದರೆ ಶೂದ್ರ ಹಾಗೂ ಪಂಚಮ ವರ್ಣಗಳ ಶ್ರೀಸಾಮಾನ್ಯರನ್ನು; ಅವತ್ತು ವಿವಿಧ ವೃತ್ತಿಗಳಲ್ಲಿ ತೊಡಗಿದ್ದ ಕಸುಬುದಾರರನ್ನು, ನಿರ್ಲಕ್ಷ್ಯಕ್ಕೆ ಒಳಗಾದ ಅಸ್ಪೃಶ್ಯರನ್ನು' ಅಲ್ಲಮ, ಸಿದ್ಧರಾಮ, ಚೆನ್ನಬಸವ, ಅಕ್ಕಮಹಾದೇವಿ ಇಂಥ ಕೆಲವರನ್ನು ಹೊರತುಪಡಿಸಿದರೆ, ಈ ಸಂಘಟನೆಯಲ್ಲಿ ಪಾಲುಗೊಂಡವರೆಲ್ಲ ಬಹುಮಟ್ಟಿಗೆ ಅಂದಿನ ಸಮಾಜದ ಕೆಳಗಿನ ಸ್ತರಗಳಿಂದ ಬಂದವರೇ; ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ, ಬಹುರೂಪೀ ಚೌಡಯ್ಯ, ತುರುಗಾಹಿ ರಾಮಣ್ಣ, ಕಾಮಾಟಿ (ಕೂಲಿ) ಭೀಮಣ್ಣ, ಕೀಲಾರದ (ಗೋಶಾಲೆಯ) ಭೀಮಣ್ಣ, ಗಾಣದ ಕಣ್ಣಪ್ಪ, ಢಕ್ಕೆಯ ಬೊಮ್ಮಣ್ಣ, ಮೇದರ ಕೇತಯ್ಯ, ಬೊಕ್ಕಸದ ಚಿಕ್ಕಣ್ಣ, ಸುಂಕದ ಬಂಕಣ್ಣ, ಒಕ್ಕಲಿಗರ ಮುದ್ದಣ್ಣ - ಈ ಹೆಸರುಗಳನ್ನು ನೋಡಿದರೆ, ಈ ಜನ ಅಂದಿನ ಸಮಾಜದ ಕೆಳವರ್ಗದವರಾಗಿದ್ದು ಅವರು ಕೈಕೊಂಡ ಕಸುಬುಗಳು ಯಾವುವು ಎನ್ನುವುದು ಸ್ಪಷ್ಟವಾಗುತ್ತದೆ. ಇವರಲ್ಲದೆ ಅಸ್ಪೃಶ್ಯ ಅಥವಾ ಪಂಚಮ ವರ್ಗದಿಂದ ಬಂದವರೂ ಸಾಕಷ್ಟಿದ್ದಾರೆ. ಸಂಬೋಳಿ ನಾಗಿದೇವ, ಮಾದಾರ ಚನ್ನಯ್ಯ, ಡೋಹರ (ಚರ್ಮ ಹದಮಾಡುವ) ಕಕ್ಕಯ್ಯ, ಮಾದರ ಧೂಳಯ್ಯ, ಅನಾಮಿಕ ಮಾಚಯ್ಯ, ಉರಿಲಿಂಗಪೆದ್ದಿ, ಕಾಳವ್ವೆ - ಈ ಕೆಲವರು ಅಸ್ಪೃಶ್ಯ ಜಾತಿಯಿಂದ ಬಂದವರು. ಇವರ ಜತೆಗೆ ಆಯ್ದಕ್ಕಿ ಲಕ್ಕಮ್ಮ, ಲಿಂಗಮ್ಮ, ಸತ್ಯಕ್ಕ, ಕದಿರ ರೆಮ್ಮವ್ವೆ, ಅಮುಗೆ ರಾಯಮ್ಮ, ಕಾಯಕದ ರೇವಮ್ಮ, ಕೊಟ್ಟಣದ ಸೋಮವ್ವೆ, ಸೂಳೆ ಸಂಕವ್ವೆ - ಮೊದಲಾದ ಸ್ತ್ರೀಯರೂ ಇದ್ದಾರೆ. ಇವರೆಲ್ಲರನ್ನು ಸ್ಥೂಲವಾಗಿ ದಲಿತರೆಂದೇ ನಿರ್ದೇಶಿಸಬಹುದು. ಯಾಕೆಂದರೆ ಇವರೆಲ್ಲರೂ ಅಂದಿನ ಸಮಾಜದ ಮೇಲುವರ್ಗದವರಿಂದ ಶೋಷಣೆಗೆ ಒಳಗಾದವರು; ಮೇಲುವರ್ಗದವರಿಗಾಗಿ ವಿವಿಧ ವೃತ್ತಿಗಳ ಮೂಲಕ ದುಡಿಯುತ್ತಾ, ಎಲ್ಲಾ ಬಗೆಯ ಸವಲತ್ತುಗಳಿಂದ ವಂಚಿತರಾಗುತ್ತಾ, ದುಃಖ-ಅವಮಾನಗಳಲ್ಲಿ ತಮ್ಮ ವ್ಯಕ್ತಿತ್ವವನ್ನೇ ಕಳೆದುಕೊಂಡು ಕೊರಗುತ್ತ ಇದ್ದವರು.

ಇಂಥ ಒಂದು ಬಹುಸಂಖ್ಯಾತ ಶೋಷಿತ ಸಮುದಾಯಕ್ಕೆ ಒಂದು ವ್ಯಕ್ತಿತ್ವವನ್ನೂ, ವಿಚಾರಮಾಡುವ ಅವಕಾಶವನ್ನೂ ಹಾಗೂ ಅಭಿವ್ಯಕ್ತಿಯ ಸ್ವಾತಂತ್ರ್ಯವನ್ನೂ ಮತ್ತು ಆತ್ಮಪ್ರತ್ಯಯ ಮೂಲವಾದ ಪ್ರತಿಭಟನೆಯ ಕೆಚ್ಚನ್ನೂ ತಂದುಕೊಟ್ಟಿದ್ದು ಶರಣ ಚಳುವಳಿ. ಈ ಚಳುವಳಿಯಿಂದ ನಿಷ್ಪನ್ನವಾದ ಶರಣಧರ್ಮ ಮೊದಲು ಮಾಡಿದ ಕೆಲಸವೆಂದರೆ, ಈ ಸಮುದಾಯದವರ ಜಾತಿ ಜನ್ಮ ಸಂಬಂಧಿಯಾದ ಕೀಳರಿಮೆಗಳನ್ನು ಕಳೆಯುವಂತಹ ಸಮಾನತಾ ನೆಲೆಯೊಂದನ್ನು

ಕಲ್ಪಿಸಿದ್ದು, ಈ ನೆಲೆಯಲ್ಲಿ ಎಲ್ಲರೂ ಸಮಾನರು; 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವ ಭಕ್ತರೆಲ್ಲರೂ ಒಂದೇ ಸಮಾನತೆಯ ನೆಲೆಗೆ ಸೇರಿದವರು. ಈ ಒಂದು ಭಾವನೆಯನ್ನು ಗಟ್ಟಿಗೊಳಿಸುವಲ್ಲಿ ವರ್ಣಾಶ್ರಮ ಪ್ರತಿಪಾದನೆಯ ಮೂಲಕ, ತರ-ತಮಗಳನ್ನು ಉಳಿಸಿಕೊಂಡು ಬಂದ ವೇದ-ಶಾಸ್ತ್ರ-ಪುರಾಣ-ಆಗಮನಗಳನ್ನು ನಿರಾಕರಿಸಿದ್ದು ಒಂದು ಹೆಜ್ಜೆಯಾದರೆ, ವ್ಯಕ್ತಿಗಳ ಆಧಾರದ ಮೇಲೆ ವ್ಯಕ್ತಿಯ ಜಾತಿಯನ್ನು ಸ್ಥಾನಮಾನಗಳನ್ನು ನಿರ್ಣಯಿಸುವ ಕ್ರಮವನ್ನು ವಿರೋಧಿಸಿ ಪ್ರತಿಯೊಂದು ವೃತ್ತಿಯನ್ನು ಕಾಯಕವೆಂದು ಕರೆದು, ಈ ಶರಣ ಧರ್ಮದಲ್ಲಿ ಕಾಯಕವೆಲ್ಲವೂ ಪೂಜ್ಯವೆಂದೂ ಮತ್ತು ಸಮಾಜದ ಸಾಮೂಹಿಕ ಉತ್ಪಾದನೆಗೆ ಹಾಗೂ ಅದರ ಸಮಾನವಾದ ವಿತರಣೆಗೆ ಪ್ರತಿಯೊಬ್ಬರೂ ನಿರ್ವಹಿಸಬೇಕಾದ ಕರ್ತವ್ಯ ಎಂದೂ ಎಣಿಸಿದ್ದು ಮತ್ತೊಂದು ಮಹತ್ವದ ಹೆಜ್ಜೆಯಾಗಿದೆ. ಹೀಗಾಗಿ ಶರಣ ಚಳುವಳಿಯಲ್ಲಿ ತೊಡಗಿಕೊಂಡ ಈ ಶ್ರೀಸಾಮಾನ್ಯರು, ಮನುಷ್ಯ ಮನುಷ್ಯರ ನಡುವಣ ತರತಮಗಳನ್ನು ವೈಚಾರಿಕವಾಗಿ ಚಿಕಿತ್ಸೆಗೆ ಒಳಗುಪಡಿಸಿದ್ದು ಗಮನಿಸಬೇಕಾದ ಸಂಗತಿಯಾಗಿದೆ. ಅಮುಗೆ ರಾಯಮ್ಮ ಎಂಬ ವಚನಕಾರ್ತಿ

ವೇದ ಶಾಸ್ತ್ರ ಆಗಮ ಪುರಾಣಗಳಲ್ಲಿ
ಶ್ರುತಿ ಸ್ಮೃತಿಗಳಲ್ಲಿ ನುಡಿವುದು ಪುಸಿ

ಎಂದು ದಿಟ್ಟತನದಿಂದ ಘೋಷಿಸುತ್ತಾಳೆ. ವೇದಶಾಸ್ತ್ರಾಗಮಗಳಲ್ಲಿ ಹೇಳಿರುವುದೆಲ್ಲ 'ಸುಳ್ಳು' ಎಂದು ಯಾಕೆ ಹೇಳುತ್ತಾರೆಂದರೆ, ಎಲ್ಲರೂ ಮೂಲತಃ ಸಮಾನರು ಎಂಬ ಸತ್ಯವನ್ನು ಅವುಗಳು ಮರೆಮಾಡುವುದರಿಂದ, ನಿಜವಾಗಿ ನೋಡಿದರೆ –

ಬ್ರಾಹ್ಮಣ ಮೊದಲು ಶ್ವಪಚ ಕಡೆಯಾಗಿ
ಎಲ್ಲರಿಗೂ ಜನನವೊಂದೇ,
ಆಹಾರ ನಿದ್ರೆ ಭಯ ಮೈಥುನ ಒಂದೇ
ಪುಣ್ಯ ಪಾಪ ಒಂದೇ ಸ್ವರ್ಗ ನರಕ ಒಂದೇ
ಬೇರೆಂಬ ಭಂಗಿತರು ನೀವು ಕೇಳಿರೋ
ಅರಿವೇ ಸತ್ಕುಲ, ಮರೆವೇ ದುಷ್ಕುಲ

ಎಂದು ಹಾವಿನಹಾಳ ಕಲ್ಲಯ್ಯ ಹೇಳುತ್ತಾನೆ. ಮಾದಾರ ಚನ್ನಯ್ಯನೆಂಬ ಮತ್ತೊಬ್ಬ ಶರಣ: ವೇದ ಶಾಸ್ತ್ರಕ್ಕೆ ಹಾರುವನಾಗಿ

ವೀರವಿತರಣಕ್ಕೆ ಕ್ಷತ್ರಿಯನಾಗಿ
ಸರ್ವವನಾರೈದು ವ್ಯಾಪಾರದೊಳಗಾಗಿ ವೈಶ್ಯನಾಗಿ
ಕೃಷಿಯ ಮಾಡುವಲ್ಲಿ ಶೂದ್ರನಾಗಿ
ಇಂತೀ ಜಾತಿ ಗೋತ್ರದೊಳಗಾಗಿ ನೀಚ ಶ್ರೇಷ್ಠ
ಎಂಬ ಎರಡು ಕುಲವಲ್ಲದೆ
ಹೊಲೆ ಹದಿನೆಂಟು ಜಾತಿ ಎಂಬ ಕುಲವಿಲ್ಲ





ಎಂದು ಹೇಳುತ್ತಾನೆ. ಈ ಕೆಲವು ಉಕ್ತಿಗಳನ್ನು ನೋಡಿದರೆ ದಲಿತ ವಚನಕಾರರು ಎಷ್ಟು ಧೈರ್ಯದಿಂದ, ಹಿಂದೂ ಧರ್ಮದ ವರ್ಣಾಶ್ರಮ ವ್ಯವಸ್ಥೆಯನ್ನು ನಿರಾಕರಿಸುತ್ತ, ಕುಲ ಹಾಗೂ ಜಾತಿಗಳ ಬಗ್ಗೆ ತಮ್ಮ ಕಾಲಕ್ಕೆ ಅಗತ್ಯವಾದ ಹಾಗೂ ನಿಜವಾದ ವ್ಯಾಖ್ಯಾನವನ್ನು ಮಾಡಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಶರಣ ಧರ್ಮದ ಸಂದರ್ಭದಲ್ಲಿ ದಲಿತರಿಗೆ ಉಂಟಾದ ಹೊಸ ಪ್ರಜ್ಞೆಯ ಸ್ವರೂಪವನ್ನು, ಅವರ ಈ ವೈಚಾರಿಕ ನಿಲುವುಗಳು ಸ್ಪಷ್ಟಪಡಿಸುತ್ತವೆ.

ಶರಣ ಧರ್ಮದ ಮುಖ್ಯ ಸಾಧನೆ ವರ್ಣಮೂಲವಾದ ತರತಮಗಳನ್ನು ಹೋಗಲಾಡಿಸುವುದು. ವೀರಶೈವನಾಗುವುದೆಂದರೆ ಜಾತಿಯ ಗಡಿಗಳನ್ನು ಮೀರಿ ಸಮಾನತೆಯ ನೆಲೆಯಲ್ಲಿ ನಿಲ್ಲುವುದು ಎಂದು ಅರ್ಥ. 'ಚತುರ್ವರ್ಣಾತೀತನೆ ವೀರಶೈವ ನೋಡಾ' ಎಂದು ಸಿದ್ಧರಾಮನು ಹೇಳುವ ಮಾತು ಇದನ್ನು ದೃಢಪಡಿಸುತ್ತದೆ. 'ಚತುರ್ವರ್ಣಾತೀತ'ವಾಗುವುದು ಎಂದರೆ, ಪರಂಪರಾಗತವಾದ ನಾಲ್ಕು ವರ್ಣಗಳನ್ನು ಮೀರುವುದು ಎಂದು ಮಾತ್ರವಲ್ಲ, ಈ ನಾಲ್ಕು ವರ್ಣಗಳನ್ನು ಒಡೆದು, ಅವೆಲ್ಲವನ್ನೂ ಬೇರೊಂದು ರೀತಿಯಲ್ಲಿ ಕೂಡಿಸುವುದು, ಒಂದು ವರ್ಣ ಮತ್ತೊಂದು ವರ್ಣದ ಜತೆ ಬೆರೆತು ಅವರೆಲ್ಲರೂ ತಮ್ಮ ಮುನ್ನಿನ ಕುಲದ ಕುರುಹುಗಳನ್ನು ಕಳೆದುಕೊಳ್ಳುವುದು ಎಂದು ಅರ್ಥ. ಬಸವಣ್ಣನವರು ತಮ್ಮ ಒಂದೆರಡು ವಚನಗಳಲ್ಲಿ –

ಕುಲವನರಸುವರೆ ಶರಣರಲ್ಲಿ
ವರ್ಣ ಸಂಕರವಾದ ಬಳಿಕ?

---

ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ಕೂಡಲ ಸಂಗನ ಶರಣರೇ ಕುಲಜರು

ಎಂದು ಹೇಳಿದ್ದಾರೆ. ಈ ಎರಡು ಉಕ್ತಿಗಳೂ ತುಂಬ ಮಹತ್ವದವುಗಳಾಗಿವೆ. ವೈದಿಕ ಧರ್ಮ ಒಂದು ಜಾತಿ ಮತ್ತೊಂದು ಜಾತಿಯೊಂದಿಗೆ ಬೆರೆಯುವುದನ್ನು 'ವರ್ಣಸಂಕರ' ಎನ್ನುತ್ತದೆ. 'ವರ್ಣಸಂಕರ' ಎನ್ನುವುದು ಹಿಂದೂಧರ್ಮದ ಪ್ರಕಾರ ಒಂದು ಮಹಾಪಾಪ; ದೊಡ್ಡ ಅನಾಹುತ; ಅದರಿಂದ ಧರ್ಮನಾಶ ಎಂದು ತಿಳಿಯಲಾಗಿದೆ. ಪ್ರತಿಯೊಂದು ವರ್ಣವೂ, ಚಾತುರ್ವರ್ಣದ ಚೌಕಟ್ಟಿನ ಸುಭದ್ರವಾಗಿರುವುದೇ ಧಾರ್ಮಿಕ ಕ್ಷೇಮಕ್ಕೆ ಅತ್ಯಗತ್ಯ; ಅದರ ಬದಲು ಒಂದು ವರ್ಣ ಮತ್ತು ಮತ್ತೊಂದರ ಜತೆ ಬೆರೆಯುವುದು ಅಥವಾ ವರ್ಣಸಂಕರವಾಗುವುದು ಹಾನಿಕರ; ಧರ್ಮಗ್ಲಾನಿಯ ಲಕ್ಷಣ– ಇದು 'ವರ್ಣಸಂಕರ'ವನ್ನು ಕುರಿತ ವೈದಿಕ ಧರ್ಮದ ನಿಲುವು. ಆದರೆ ವೈದಿಕ ಧರ್ಮವನ್ನು ಪ್ರಶ್ನೆ ಮಾಡಿದ, ಪ್ರತಿಭಟಿಸಿದ ಬಸವಣ್ಣನವರ ಪ್ರಕಾರ 'ವರ್ಣಸಂಕರ' ಅತ್ಯಗತ್ಯವಾದದ್ದು. ಜಾತಿ ಜಾತಿಗಳ ನಡುವಣ ತರತಮಗಳ ನಿರ್ಮೂಲನಕ್ಕೆ. ಅದರಿಂದ 'ವರ್ಣಸಂಕರ'ವಾಗುವುದು ಅಥವಾ 'ಚಾತುರ್ವರ್ಣಾತೀತ'ವಾಗುವುದು ಒಂದು ಹೊಸ ಸಾಮಾಜಿಕ-ಧಾರ್ಮಿಕ ಪರಿವರ್ತನೆಯ

ಲಕ್ಷಣವಾಗಿರುವಾಗ, ಹೀಗೆ 'ವರ್ಣಸಂಕರ'ವಾದ ಬಳಿಕ ಮತ್ತು ಆ ಮೂಲಕ ಶರಣರಾದ ಬಳಿಕ, ಅದರಲ್ಲಿ ಅವರ ಹುಟ್ಟಿನಿಂದ ಬಂದಂಥ 'ಜಾತಿ'ಗಳನ್ನು ಹುಡುಕಬಾರದೆಂಬುದು ಬಸವಣ್ಣನವರ ನಿಲುವಾಗಿದೆ. ಹಾಗೆಯೇ ವ್ಯಕ್ತಿ ವ್ಯಕ್ತಿಗಳ ನಡುವೆ ತರತಮಗಳನ್ನು ಹುಡುಕದೆ 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ' ಕೂಡಲ ಸಂಗನ ಶರಣರಾಗುವುದಕ್ಕಿಂತ ಬೇರೆಯೆ ಶ್ರೇಷ್ಠವಾದ ಕುಲ ಯಾವುದೂ ಇಲ್ಲ. ಈ ದೃಷ್ಟಿಯಿಂದ ಹೇಳುವುದಾದರೆ, ಇರುವುದು ಎರಡೇ ವರ್ಗ; 'ಸತ್ಕುಲ', 'ದುಷ್ಕುಲ'; 'ನೀಚ', 'ಶ್ರೇಷ್ಠ'; 'ಶಿವಭಕ್ತ', (ಅದಕ್ಕೆ ಹೊರತಾದ) 'ಭವಿ'.

ಶರಣ ಚಳುವಳಿಯ ಈ ಹೊಸ ಧಾರ್ಮಿಕ ನಿಲುವುಗಳಲ್ಲಿ ಅಂದಿನ ಬಹುಸಂಖ್ಯಾತ ದಲಿತರು ತಮ್ಮ ಹೊಸ ಹುಟ್ಟುಗಳನ್ನು ಪಡೆದುಕೊಂಡರು. ತುಂಬ ಧೈರ್ಯದಿಂದ ಸಾಂಪ್ರದಾಯಿಕವಾದ ನಂಬಿಕೆಗಳನ್ನು, ಆಚಾರ–ವಿಚಾರಗಳನ್ನು ಪ್ರಶ್ನೆ ಮಾಡಿದರು. ತಮ್ಮ ತಮ್ಮ ವೃತ್ತಿಗಳ ಮೂಲಕ ಬಂದ ಕೀಳರಿಮೆಗಳನ್ನು ಕಳೆದುಕೊಂಡು ಕಾಯಕಜೀವಿಗಳಾದರು. ಮತ್ತು ತಮ್ಮ ತಮ್ಮ ಅಂತರಂಗದ ಅನುಭವಗಳನ್ನು ತಮ್ಮ ಕಾಯಕದ ಪ್ರತೀಕಗಳ ಮೂಲಕ ಅಭಿವ್ಯಕ್ತಿಸುವ ಸಾಮರ್ಥ್ಯವನ್ನು ಗಳಿಸಿಕೊಂಡರು. 'ತಡೆನೆಲೆಯಿಲ್ಲದ ಮಹಾನದಿಯಲ್ಲಿ ಒಡಲಿಲ್ಲದಂಬಿಗ ಬಂದಿದ್ದೇನೆ. ಹಿಡಿವ ಬಿಡುವ ಮನವ ಬೆಲೆಗೊಟ್ಟೊಡೆ ಕಡೆ ಹಾಯಿಸುವೆ ಈ ಮಹಾ ಹೊಳೆಯ' ಎಂದು ಅಂಬಿಗರ ಚೌಡಯ್ಯನೂ, 'ಅಂಗದ ಬೊಕ್ಕಸಕ್ಕೆ ಚಿದ್ಘನ ಲಿಂಗವೆಂದೆಂಬ ಬೀಗ, ಎಸಳ ತೆಗೆವುದಕ್ಕೆ ಕೈಯ್ಯ ಕಾಣೆ', ಎಂದು ಬೊಕ್ಕಸದ ಚಿಕ್ಕಣ್ಣನೂ ಹೇಳಿಕೊಳ್ಳುವುದಕ್ಕೆ ಸಾಧ್ಯವಾದದ್ದು, ಈ ಚಳುವಳಿಯ ಸಾಧನೆಯಾಗಿದೆ.

ಈ ಅನುಭಾವಿಕ ಎಚ್ಚರದೊಂದಿಗೆ, ಈ ದಲಿತ ಶರಣರು, ತಮ್ಮ ಸುತ್ತಣ ಸಮಾಜವನ್ನೂ, ಅದರ ಅವ್ಯವಸ್ಥೆಗಳನ್ನೂ ಕುರಿತು ನಿರ್ಭೀತಿಯಿಂದ ವಿಮರ್ಶೆ ಮಾಡುವ ಕೆಚ್ಚನ್ನೂ ಪಡೆದುಕೊಂಡರೆಂಬುದು ವಿಶೇಷದ ಸಂಗತಿಯಾಗಿದೆ. ಯಾವ ಜನ ಶತಮಾನಗಳ ಕಾಲ ಮೂಕವಾಗಿ, ದೀನವಾಗಿ, ಸದ್ದಿಲ್ಲದೆ, ತಮ್ಮ ವೇದನೆಗಳನ್ನು ಸಿಟ್ಟುಗಳನ್ನು ಹೇಳಿಕೊಳ್ಳಲು ಅವಕಾಶವಿಲ್ಲದಂತಹ ಶೋಷಣೆಗೆ ಒಳಗಾಗಿದ್ದರೋ, ಅದೇ ಜನ ವೈದಿಕ ಧರ್ಮದ ಪುರೋಹಿತಶಾಹೀ ಕುತಂತ್ರಗಳನ್ನೂ, ಜಾತಿ ವ್ಯವಸ್ಥೆಗಳನ್ನೂ, ಧೈರ್ಯದಿಂದ ವಿಮರ್ಶಿಸಿದ ಹಾಗೆ. ತಾವು ಪ್ರವೇಶಿಸಿದ ಹೊಸ ಧರ್ಮದ 'ಪುರೋಹಿತಶಾಹಿ'ಯನ್ನೂ, ಸಾಮಾಜಿಕ ಅಸಾಂಗತ್ಯಗಳನ್ನೂ ವಿಮರ್ಶೆಗೆ ಗುರಿಪಡಿಸಿದರೆಂಬುದು, ಗಮನಿಸಬೇಕಾದ ಸಂಗತಿಯಾಗಿದೆ. ಅಕ್ಕಮ್ಮ ಎಂಬ ಮಹಿಳೆ 'ಗುರುವಾದರೂ ಆಚಾರಭ್ರಷ್ಟನಾದಡೆ, ಅನುಸರಿಸಲಾಗದು ಎನ್ನುತ್ತಾಳೆ. 'ವೇಷವ ತೊಟ್ಟು ಗ್ರಾಸಕ್ಕೆ ತಿರುಗುವ ವೇಷಧಾರಿಗಳ ಕಂಡಡೆ ನಾಚಿತೆನ್ನ ಮನವು' ಎನ್ನುತ್ತಾಳೆ ಅಮುಗೆ ರಾಯಮ್ಮ. ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ಅವನ ಮನೆಯಲ್ಲಿ ಉಣಬಾರದೆಂದು ಅಕ್ಕಿಯ ಕಣಕವ ತಕ್ಕೊಂಡು ಹೋಗುವ ಗುರುವನು ಕಂಡರೆ ಕೆಡವಿ





ಹಾಕಿ, ಮೂಗು ಕೊಯ್ದು ಇಟ್ಟಿಗೆಯಲ್ಲಿ ಒರೆಸಿ, ನಿಂಬೆಹುಳಿ ಹಿಂಡಿ ಪಡುವಲ ಗಾಳಿಗೆ ಹಿಂಡಿ ಎನ್ನುತ್ತಾನೆ ಅಂಬಿಗರ ಚೌಡಯ್ಯ.

ಈ ಬಗೆಯ ಧೈರ್ಯ ಮತ್ತು ಆತ್ಮಪ್ರತ್ಯಯ ಅಂದಿನ ಶೂದ್ರರಿಗೆ ದಲಿತರಿಗೆ ಬಂದದ್ದು ಸಾಮಾನ್ಯವಾದ ಸಂಗತಿಯಲ್ಲ. ಆದರೆ ಈ ಜನ ಈ ಧಾರ್ಮಿಕ ಸಾಮಾಜಿಕ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಮತ್ತು ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಳ್ಳಲು ಸಾಧ್ಯವಾದದ್ದು, ಈ ಶರಣ ಧರ್ಮ ಜನಸಾಮಾನ್ಯರ ಭಾಷೆಯಾದ ಕನ್ನಡವನ್ನು ತನ್ನ ವಿಚಾರದ ಭಾಷೆಯನ್ನಾಗಿ ಅಳವಡಿಸಿಕೊಂಡಿದ್ದರಿಂದ ಎಂಬುದನ್ನು ಮರೆಯಬಾರದು.

ಅಷ್ಟೇ ಅಲ್ಲ. ಈ ಚಳುವಳಿಯ ಕೇಂದ್ರವ್ಯಕ್ತಿಗಳಾದ ಬಸವಣ್ಣ ಮತ್ತಿತರರು, ತಮ್ಮ ಮುಚ್ಚುಮರೆಯಿಲ್ಲದ ನಡವಳಿಕೆಯ ಮೂಲಕ, ಅದಮ್ಯವಾದ ಜೀವನಪ್ರೀತಿಯ ಮೂಲಕ, 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೂ ಒಂದೇ ಎಂಬೆ' ಎಂಬ ನಿಲುವಿನ ಮೂಲಕ ಅಂದಿನ ಬಹುಸಂಖ್ಯಾತ ಜನಸಾಮಾನ್ಯರಿಂದ 'ಇವ ನಮ್ಮವ, ಇವ ನಮ್ಮವ' ಎಂದು ಅಂಗೀಕೃತರಾದ ಕಾರಣ, ಅಂದು ಒಂದು ಹೊಸ ಸಾಮಾಜಿಕ–ಧಾರ್ಮಿಕ ಚಳುವಳಿ ರೂಪುಗೊಳ್ಳಲು ಸಾಧ್ಯವಾಯಿತು. ಆದರೆ ಈ ಚಳುವಳಿಯ 'ದಲಿತ ಪ್ರಜ್ಞೆ', ಇವತ್ತಿನ 'ದಲಿತ ಪ್ರಜ್ಞೆ'ಗೆ ಹೋಲಿಸಿದರೆ, ಅನ್ಯಾಯಗಳ ಹಾಗೂ ಶೋಷಣೆಗಳ ವಿರುದ್ಧ ಹೋರಾಡುವ ಆರ್ಥಿಕ–ರಾಜಕೀಯ ಸ್ವರೂಪದ್ದಾಗಿರದೆ, ಬಹುಮಟ್ಟಿಗೆ ಧಾರ್ಮಿಕ–ಆಧ್ಯಾತ್ಮಿಕ ಸ್ವರೂಪದ್ದಾಗಿದೆ ಎಂಬುದು ನಿಜ. ಆದರೆ ಶರಣಧರ್ಮ ಹನ್ನೆರಡನೆಯ ಶತಮಾನದಷ್ಟು ಹಿಂದೆ, ಸಹಸ್ರಾರು ವರ್ಷಗಳಿಂದ, ಹಿಂದೂಧರ್ಮದ ವರ್ಣವ್ಯವಸ್ಥೆಯ ಯಮಭಾರದ ಕೆಳಗೆ ಬಿಡಿಸಿಕೊಳ್ಳಲುಬಾರದಂತೆ, ಶೋಷಣೆಗೆ ನಿರ್ಲಕ್ಷ್ಯಕ್ಕೆ ಒಳಗಾದ ಈ ದೇಶದ ಕೆಳಗಿನ ಸ್ತರದ ಬದುಕಿಗೆ, ಹೊಸ ಎಚ್ಚರವನ್ನೂ, ಆತ್ಮಪ್ರತ್ಯಯವನ್ನೂ ಪ್ರತಿಭಟನೆಯ ದನಿಗಳನ್ನೂ ಮೊಟ್ಟ ಮೊದಲಿಗೆ ತಂದುಕೊಟ್ಟಿತೆಂಬುದು ಸಾಮಾನ್ಯವಾದ ವಿಚಾರವಲ್ಲ. □

ರಸವನರಿವುದಕ್ಕೆ ಜಿಹ್ವೆಯಾಗಿ ಬಂದು
ಗಂಧವನರಿವುದಕ್ಕೆ ನಾಸಿಕವಾಗಿ ಬಂದು
ರೂಪವನರಿವುದಕ್ಕೆ ಅಕ್ಷಿಯಾಗಿ ಬಂದು
ಶಬ್ದವನರಿವುದಕ್ಕೆ ಶ್ರೋತ್ರವಾಗಿ ಬಂದು
ಸ್ಪರ್ಶವನರಿವುದಕ್ಕೆ ತ್ವಕ್ಕಾಗಿ ಬಂದು
ಇಂತೀ ಘಟದ ಮಧ್ಯದಲ್ಲಿ ನಿಂದು
ಪಂಚವಕ್ತ್ರನಾದೆಯಲ್ಲ
ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವೇ

# ಮರಹು ಘನ; ನಿಮ್ಮ ನೆನೆವ ಮನ ಕಿರಿದೆನ್ನಬಹುದೆ? ಬಾರದಯ್ಯಾ.

ರವೀಶ್‌ಕುಮಾರ್ ಬಿ.

ಮನಸ್ಸು ಆಕಾರದಲ್ಲಿ ಕಿರಿಯದಾದರೂ; ಶಕ್ತಿಯಲ್ಲಿ ಹಿರಿಯದಾದದ್ದು. ನಮ್ಮ ಮನಸ್ಸಿನ ಶಕ್ತಿಯು ಅಗಾಧವಾದದ್ದು. ಆದರೆ ನಮಗೆ ಅದರ ಅರಿವಿಲ್ಲ. "ಮನಸ್ಸು ಮಾಡಿದರೆ ಏನು ಬೇಕಾದರೂ ಮಾಡಬಹುದು; ಮನಸ್ಸಿದ್ದರೆ ಮಾರ್ಗ" ಎಂದು ಹೇಳುತ್ತೇವೆ. ಆದರೆ ನಾವು ಏನೂ ಸಾಧನೆಯನ್ನು ಮಾಡುವುದಿಲ್ಲ. ನಮಗೆ ಯಾವ ಮಾರ್ಗವು ಗೋಚರಿಸುವುದಿಲ್ಲ. ಏಕೆಂದರೆ ನಮಗೆ ನಮ್ಮ ಮನಸ್ಸಿನ ಸದ್ಬಳಕೆ ಗೊತ್ತಿಲ್ಲ; ನಮ್ಮನ್ನು ಆವರಿಸಿರುವ ಮರೆವು ನಮ್ಮ ಸ್ವಸ್ವರೂಪ ಶಕ್ತಿಯ ಅಗಾಧತೆಯನ್ನು ಮರೆಯಿಸಿದೆ. ಮನಸ್ಸು ಕೆಳಮುಖವಾಗಿ ಚಲಿಸುವುದೇ ಹೆಚ್ಚು; ಜೀವನಕ್ಕೆ ಬೇಕಾಗಿರದ ವ್ಯರ್ಥವಾದ ಆಲೋಚನೆಗಳು ಸದಾ ನಮ್ಮ ಮನಸ್ಸಿನಲ್ಲಿ ಮೂಡಿ, ಋಣಾತ್ಮಕವಾದ ಚಿಂತನೆಗಳಿಂದ ನಮ್ಮನ್ನು ಘಾಸಿಗೊಳಿಸುತ್ತವೆ. ಅದೇ ಮನಸ್ಸನ್ನು ನಾವು ಮೇಲ್ಮುಖ ಚಲನೆಗೆ ಒಳಪಡಿಸಿದರೆ ಜೀವನಕ್ಕೆ ಬೇಕಾದ ಉತ್ತಮ ಆಲೋಚನೆಗಳು ಸದಾ ನಮ್ಮ ಮನಸ್ಸಿನಲ್ಲಿ ಮೂಡಿ, ಧನಾತ್ಮಕವಾದ ಚಿಂತನೆಗಳಿಂದ ನಮ್ಮನ್ನು ಅಭಿವೃದ್ಧಿ ಪಥದ ಕಡೆಗೆ ಕರೆದುಕೊಂಡು ಹೋಗುತ್ತದೆ. ನಮ್ಮ ಏಳುಬೀಳುಗಳಿಗೆ ನಮ್ಮ ಮನಸ್ಸೇ ಕಾರಣ. ಸ್ಯಾಮುಯೇಲ್ ಸ್ಮೈಲ್ಸ್ ಹೇಳುವಂತೆ "ನಿಮ್ಮ ಮನಸ್ಸಿನಲ್ಲಿ ಒಂದು ಒಳ್ಳೆಯ ಆಲೋಚನೆಯನ್ನು ಮಾಡಿ; ಅದು ನಿಮ್ಮನ್ನು ಒಂದು ಒಳ್ಳೆಯ ಕಾರ್ಯಕ್ಕೆ ಪ್ರೇರೇಪಿಸೀತು. ಒಂದು ಒಳ್ಳೆಯ ಕಾರ್ಯವನ್ನು ಮಾಡಿ; ಅದು ನಿಮ್ಮನ್ನು ಒಂದು ಅಭ್ಯಾಸಕ್ಕೆಳಸೀತು. ಒಂದು ಒಳ್ಳೆಯ ಅಭ್ಯಾಸವನ್ನು ರೂಢಿಸಿಕೊಳ್ಳಿ; ಅದು ನಿಮ್ಮ ನಡತೆಗೆ ಪುಟಗೊಟ್ಟೀತು. ಒಂದು ಒಳ್ಳೆಯ ನಡತೆಯಿಂದ ನಿಮ್ಮ ಅದೃಷ್ಟ ಕುದುರಲೇಬೇಕು." ನಮ್ಮ ಮನಸ್ಸಿಗೆ ಶಿವಜ್ಞಾನದ ಅರಿವು ಮೂಡಿದರೆ ಮಾನವರಾದ ನಾವು ಮಹಾತ್ಮರಾಗಬಹುದು. ಮನಸ್ಸಿನ ಶಕ್ತಿಯ ಹಿರಿಮೆಯನ್ನು ಬಸವಣ್ಣನವರು ಒಂದು ವಚನದಲ್ಲಿ ಹೀಗೆ ಹೇಳುತ್ತಾರೆ.

ಕರಿ ಘನ; ಅಂಕುಶ ಕಿಱಿದೆನ್ನಬಹುದೆ? ಬಾರದಯ್ಯಾ.

ಗಿರಿ ಘನ; ವಜ್ರ ಕಿಱಿದೆನ್ನಬಹುದೆ? ಬಾರದಯ್ಯಾ.

ತಮಂಧ ಘನ; ಜ್ಯೋತಿ ಕಿಱಿದೆನ್ನಬಹುದೆ? ಬಾರದಯ್ಯಾ.

ನಿವೃತ್ತ ಕನ್ನಡ ಭಾಷಾ ಶಿಕ್ಷಕರು ಮತ್ತು ರಾಜ್ಯ ಸಂಪನ್ಮೂಲ ವ್ಯಕ್ತಿಗಳು (ಕನ್ನಡ)
ಮೈಸೂರು. ೯೪೪೮೯೬೮೪೯೮



ಮಱಹು ಘನ; ನಿಮ್ಮ ನೆನೆವ ಮನ ಕಿಱಿದೆನ್ನಬಹುದೆ? ಬಾರದಯ್ಯಾ.

ಕೂಡಲಸಂಗಮದೇವಾ.

ಈ ವಚನದಲ್ಲಿ ಬಸವಣ್ಣನವರು ನಮ್ಮ ಮನಸ್ಸಿನ ವಿಶಿಷ್ಟವಾದ ಶಕ್ತಿಯನ್ನು ಕುರಿತು ಬಹು ಸೊಗಸಾಗಿ ವಿವರಿಸಿದ್ದಾರೆ. ನಮ್ಮ ಮನಸ್ಸಿನ ಶಕ್ತಿ ಮತ್ತು ಸಾಧ್ಯತೆಗಳಿಗೆ ಪರಿಮಿತಿಯೇ ಇಲ್ಲ. ಮನಸ್ಸು ಕಿರಿದಾಗಿದ್ದರೂ ಕೂಡಲಸಂಗಮದೇವನ ನೆನಹು ನಮ್ಮ ಮನದಲ್ಲಿ ತುಂಬಿದಾಗ ಅದು ಅಗಾಧವಾದ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ನಮ್ಮ ಮನಸ್ಸಿನ ಘನವಾದ ಶಕ್ತಿಯಿಂದ ಅನುಭಾವದ ಬೆಳಕು ಹೊಳೆಯಿಸಿ, ನಮ್ಮ ಬದುಕಿಗೆ ಬೇಕಾದ ಜ್ಞಾನದ/ ಅರಿವಿನ ಮಾರ್ಗವನ್ನು ತೋರುತ್ತದೆ. ನಮಗೆ ಮರೆವು (ಅಜ್ಞಾನ) ಸಹಜವಾದುದು; ಆದರೆ ಪ್ರತಿನಿತ್ಯ ಮನದಲ್ಲಿ ಶಿವನ ಸ್ಮರಣೆಯನ್ನು ಮಾಡುತ್ತಿದ್ದರೆ ಈ ನೆನೆಪಿನ ಶಕ್ತಿ ಹೆಚ್ಚುತ್ತಾ ಹೋಗುತ್ತದೆ. ಅಂದರೆ ನಮ್ಮಲ್ಲಿರುವ ಅಜ್ಞಾನವು ಹೋಗಿ, ಸುಜ್ಞಾನವು ಪ್ರಕಾಶಿಸುತ್ತದೆ. ಪ್ರತಿನಿತ್ಯ ಮನದಲ್ಲಿ ಶಿವನಾಮ ಸ್ಮರಣೆಯನ್ನು ಮಾಡುತ್ತಿದ್ದರೆ, ಸುಜ್ಞಾನದ ಬಲದಿಂದ ನಮ್ಮನ್ನು ಘಾಸಿಗೊಳಿಸುವ ಋಣಾತ್ಮಕ ಶಕ್ತಿಯು ನಾಶವಾಗಿ, ನಮ್ಮಲ್ಲಿ ಧನಾತ್ಮಕ ಶಕ್ತಿಯು ವೃದ್ಧಿಗೊಳ್ಳುತ್ತದೆ. ನಮ್ಮನ್ನು ಸತ್ಕರ್ಮ ಮಾಡುವುದಕ್ಕೆ ಪ್ರೇರೇಪಣೆಯನ್ನು ನೀಡುತ್ತದೆ. ಸತ್ಕರ್ಮದಿಂದ ಸತ್ಫಲಗಳು ತಾನೇ ತಾನಾಗಿ ದೊರಕುತ್ತದೆ. "ಮನಯೇವ ಕಾರಣಂ ಬಂಧಮೋಕ್ಷಯೋಃ" – ನಮ್ಮ ಬಂಧನಕ್ಕೆ ಅಥವಾ ಮೋಕ್ಷಕ್ಕೆ ಮನಸ್ಸೇ ಕಾರಣ. ಆದ್ದರಿಂದ "ಮರೆವಿಗಿಂತ ಮನಸ್ಸು ಕಿರಿದಾದರೂ ಶಿವನನ್ನು ನೆನೆಯುವ ಮನಸ್ಸು ಹಿರಿದು" ಎಂಬುದು ಬಸವಣ್ಣನವರ ಅಭಿಪ್ರಾಯವಾಗಿದೆ. ಇದನ್ನು ನಮಗೆ ಮನವರಿಕೆ ಮಾಡಿಕೊಡಲು ಪ್ರತಿನಿತ್ಯ ನಾವು ಕಾಣುವ ಮೂರು ದೃಷ್ಟಾಂತಗಳನ್ನು ಕೊಡುತ್ತಾರೆ.

"ಕರಿ ಘನ; ಅಂಕುಶ ಕಿಱಿದೆನ್ನಬಹುದೆ? ಬಾರದಯ್ಯಾ." : ಆನೆಯು ಬೃಹತ್ತಾದ (ಘನವಾದ) ಪ್ರಾಣಿ; ಆದರೆ ಆನೆಯನ್ನು ಅಂಕೆಯಲ್ಲಿಡುವ (ಹಿಡಿತದಲ್ಲಿಡುವ) ಅಂಕುಶವು ಕಿರಿದಾದದ್ದು. ಒಂದು ಸಣ್ಣ ಅಂಕುಶಕ್ಕೆ ದೊಡ್ಡದಾದ ಆನೆಯು ಅಂಜುತ್ತದೆ. ಬೃಹತ್ತಾದ ಆನೆಯ ಮುಂದೆ ನಿಂತಾಗ ಮನುಷ್ಯ ದೈಹಿಕವಾಗಿ ಬಹಳ ಅಲ್ಪನಾಗಿ ಕಾಣುತ್ತಾನೆ. ಒಮ್ಮೆ ಆನೆಯು ಸೊಂಡಿಲಿನಿಂದ ಬೀಸಿ ಒಗೆದರೆ, ಮನುಷ್ಯ ಎಷ್ಟೋ ದೂರ ಹಾರಿಹೋಗುತ್ತಾನೆ. ಆದರೆ ಆನೆಗಿಂತ ಸಣ್ಣ ದೇಹವನ್ನು ಹೊಂದಿರುವ ಮನುಷ್ಯನು ಆನೆಯ ಕುಂಭಸ್ಥಳದ ಮೇಲೆ ಕುಳಿತು, ಕಿರಿಯದಾದ ಅಂಕುಶದಿಂದ ಆನೆಯ ನೆತ್ತಿಯ ಮೇಲೆ ತಿವಿಯುವುದರ ಮೂಲಕ ಆನೆಯನ್ನು ತಾನು ಹೇಳಿದಂತೆ ಕೇಳುವಂತೆ ಮಾಡುತ್ತಾನೆ. ಅಂದರೆ ಬೃಹದಾಕಾರದ ಆನೆಯನ್ನು ಅತ್ಯಂತ ಕಿರಿಯದಾದ ಅಂಕುಶ ಹಿಡಿತಕ್ಕೆ ತರುತ್ತದೆ. ಇಂತಹ ಅಂಕುಶವನ್ನು ಕಿರಿದು ಎನ್ನಬಹುದೇ? ಹೀಗೆನ್ನಲು ಬರುವುದಿಲ್ಲ. ಅದೇ ರೀತಿ ಶಿವನನ್ನು ನೆನೆಯುವ ಮನಸ್ಸು ಕಿರಿಯದಾದರೂ, ನಮ್ಮಲ್ಲಿರುವ ಅಷ್ಟಮದಗಳನ್ನು ಹೋಗಲಾಡಿಸಿ, ನಮ್ಮಲ್ಲಿ ಸ್ವಸ್ವರೂಪ ಜ್ಞಾನವನ್ನು ಜಾಗೃತಗೊಳಿಸಿ, ನಮ್ಮ ಮನವನ್ನು ನಮ್ಮ ಹಿಡಿತಕ್ಕೆ ತರುತ್ತದೆ.

ಮನವನ್ನು ಹಿಡಿತದಲ್ಲಿಟ್ಟು ಕೊಂಡವನು ಮಹತ್ತರವಾದ ಸಾಧನೆಯನ್ನು ಮಾಡಲು ಸಾಧ್ಯ. ಮನಸ್ಸನ್ನು ಗೆದ್ದವನು; ಜಗತ್ತನ್ನು ಗೆಲ್ಲುತ್ತಾನೆ.

"ಸಾಂಕೇತಿಕ ಅರ್ಥದಲ್ಲಿ ಹೇಳುವುದಾದರೆ ಆನೆ ಎನ್ನುವುದು ಮದದ/ಅಹಂಕಾರದ ಸಂಕೇತ. ಮಾನವನಿಗೆ ಕುಲ ಮದ, ಬಲ ಮದ, ಧನ ಮದ, ರೂಪ ಮದ, ಯೌವನ ಮದ, ವಿದ್ಯಾ ಮದ, ರಾಜ್ಯ/ಅಧಿಕಾರ ಮದ ಮತ್ತು ಪರಿವಾರ ಮದ ಎಂಬ ಅಷ್ಟ ಮದಗಳು ಹಿರಿದಾಗಿ ತೋರುತ್ತದೆ. ಇವು ಅಶಾಶ್ವತವಾದವು ಎಂಬ ಮರೆವು ಆವರಿಸಿಕೊಂಡು, ಅವುಗಳ ಹಿಂದೆ ಬಿದ್ದು, ತನ್ನ ಅವನತಿಗೆ ತಾನೇ ಕಾರಣನಾಗುತ್ತಾನೆ. ಅಂಕುಶವೆಂಬ ಶಿವನ ನೆನೆಯುವ ಮನದಿಂದ ತನ್ನ ನಿಜಸ್ವರೂಪದ ಅರಿವಿನಿಂದ ಅಷ್ಟಮದಗಳು ಅಶಾಶ್ವತವಾದವು ಎಂಬುದು ಮನವರಿಕೆಯಾಗಿ, ಅವುಗಳನ್ನು ವರ್ಜಿಸಬೇಕು ಎಂಬ ನಿತ್ಯಜ್ಞಾನವುಂಟಾಗುತ್ತದೆ" ಎಂಬುದು ಬಸವಣ್ಣನವರ ನಿಲುವು.

ಗಿರಿ ಘನ; ವಜ್ರಕಿಱಿದೆನ್ನಬಹುದೆ? ಬಾರದಯ್ಯಾ : ಒಂದು ಪೌರಾಣಿಕ ಕಥೆಯ ಪ್ರಕಾರ ಹಿಂದೆ ಪರ್ವತಗಳಿಗೆಲ್ಲಾ ರೆಕ್ಕೆಗಳು ಇದ್ದವು. ಅವು ರೆಕ್ಕೆಗಳನ್ನು ಬಳಸಿಕೊಂಡು ಅಹಂಕಾರದಿಂದ ಹಾರಾಡುತ್ತಿದ್ದವು. ಇದರಿಂದ ಬಹಳ ಅನಾಹುತಗಳು ಆಗುತ್ತಿದ್ದವು. ಋಷಿಮುನಿಗಳ ಪ್ರಾರ್ಥನೆಯಂತೆ ಇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿ, ಅವು ಅಹಂಕಾರದಿಂದ ಮಾಡುತ್ತಿದ್ದ ಅನಾಹುತಗಳನ್ನು ತಪ್ಪಿಸಿದನು. ಅಂದರೆ ಬೃಹದಾಕಾರದ ಪರ್ವತಗಳ ರೆಕ್ಕೆಗಳನ್ನು ಇಂದ್ರನ ಕಿರಿದಾದ ವಜ್ರಾಯುಧ ಕತ್ತರಿಸಿ ಹಾಕಿತು. ಇಂತಹ ವಜ್ರಾಯುಧವನ್ನು ಕಿರಿದು ಎನ್ನಬಹುದೇ? ಹೀಗೆನ್ನಲು ಬರುವುದಿಲ್ಲ. ಅದೇ ರೀತಿ ಶಿವನನ್ನು ನೆನೆಯುವ ಮನಸ್ಸು ಕಿರಿಯದಾದರೂ ನಮ್ಮಲ್ಲಿ ಅಡಗಿರುವ ನಾನೇ ಹೆಚ್ಚು ಶಕ್ತಿವಂತ ಎಂಬ ಭಾವನೆಯನ್ನು ಹೋಗಲಾಡಿಸಿ, ನಮ್ಮಲ್ಲಿ ಸ್ವಸ್ವರೂಪ ಜ್ಞಾನವನ್ನು ಜಾಗೃತಗೊಳಿಸಿ, ನಾನೇ ಹೆಚ್ಚು ಶಕ್ತಿವಂತ ಎಂದು ಹಾರಾಡಲು ಸಹಕಾರಿಯಾದ ನಮ್ಮ ಶಕ್ತಿಯ ಪ್ರತೀಕವಾದ ರೆಕ್ಕೆಗಳನ್ನು ಕತ್ತರಿಸಿ ಹಾಕುತ್ತದೆ. "ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಭಾವ ಮನದಲ್ಲಿ ಮೂಡುತ್ತದೆ.

"ಸಾಂಕೇತಿಕ ಅರ್ಥದಲ್ಲಿ ಹೇಳುವುದಾದರೆ ಗಿರಿ/ಪರ್ವತ ಎನ್ನುವುದು ಬೃಹತ್ ಶಕ್ತಿಯ ಸಂಕೇತ. ಇಂತಹ ಬೃಹತ್ ಶಕ್ತಿಯುತವಾದ ಪರ್ವತವನ್ನು ಅತ್ಯಂತ ಕಿರಿಯದಾದ ವಜ್ರಾಯುಧವು ಒಡೆದು ಹಾಕುತ್ತದೆ. ಅದೇ ರೀತಿಯಲ್ಲಿ ಮಾನವನಲ್ಲಿಯೂ ಸಹ ನಾನು ಹೆಚ್ಚು ಶಕ್ತಿವಂತ ಎಂಬ ಭಾವದಿಂದ ಇತರರ ಮೇಲೆ ದಬ್ಬಾಳಿಕೆ, ಶೋಷಣೆ ಮಾಡುವ ಪ್ರವೃತ್ತಿಯು ಹೆಚ್ಚಾಗುತ್ತದೆ. ಮಾನವನಿಗೆ ತನ್ನ ಶಕ್ತಿಯೇ ಹಿರಿದಾಗಿ ಕಾಣುತ್ತದೆ. ಇದು ಅಶಾಶ್ವತವಾದದ್ದು ಎಂಬ ಮರೆವು ಆವರಿಸಿಕೊಂಡು, ಅದರ ಹಿಂದೆ ಬಿದ್ದು, ತನ್ನ ಅವನತಿಗೆ ತಾನೇ ಕಾರಣನಾಗುತ್ತಾನೆ. ವಜ್ರಾಯುಧವೆಂಬ ಶಿವನ ನೆನೆಯುವ ಮನದಿಂದ ತನ್ನ ನಿಜಸ್ವರೂಪದ ಅರಿವಿನಿಂದ ನನ್ನಲ್ಲಿರುವ ಶಕ್ತಿಯು ಅಶಾಶ್ವತವಾದವು ಎಂಬುದು ಮನವರಿಕೆಯಾಗಿ ನಿತ್ಯಜ್ಞಾನವುಂಟಾಗುತ್ತದೆ" ಎಂಬುದು ಬಸವಣ್ಣನವರ ನಿಲುವು.





ತಮಂಧ ಘನ; ಜ್ಯೋತಿ ಕಿಱಿದೆನ್ನಬಹುದೆ? ಬಾರದಯ್ಯಾ: ತಮಂಧ (ಕತ್ತಲು) ಬಹಳ ಬಲವತ್ತರವಾದುದು. ಆದರೆ ಒಂದು ಸಣ್ಣ ದೀಪ (ಜ್ಯೋತಿ) ಕತ್ತಲನ್ನು ಹೋಗಲಾಡಿಸುತ್ತದೆ. ದೀರ್ಘಕಾಲದಿಂದ ಕವಿದಿರುವ ಅಂಧಕಾರವು ಒಂದು ಬೆಳಕಿನ ಸ್ಪರ್ಶದಿಂದ ಕರಗಿ ಹೋಗುತ್ತದೆ. ಜ್ಯೋತಿಯು/ದೀಪವು ಎಲ್ಲೋ ಒಂದು ಮೂಲೆಯಲ್ಲಿದ್ದರೂ ತನ್ನ ಬೆಳಕಿನ ಕಿರಣಗಳಿಂದ ಇಡೀ ಪರಿಸರವನ್ನೇ ವ್ಯಾಪಿಸಿ, ಕತ್ತಲನ್ನು ಹೋಗಲಾಡಿಸುತ್ತದೆ. ಮೇಲುನೋಟಕ್ಕೆ ಜ್ಯೋತಿಯು ಕಿರಿಯದಾದರೂ ಅದು ಹೊರಹೊಮ್ಮಿಸುವ ಬೆಳಕು ಮಹತ್ತರವಾದುದು. ಜ್ಯೋತಿಕಿರಿದಾದರೂ ಹಿರಿಯದಾದ ಕತ್ತಲನ್ನು ಹೋಗಲಾಡಿಸುತ್ತದೆ. ಇಂತಹ ಜ್ಯೋತಿಯನ್ನು ಕಿರಿದು ಎನ್ನಬಹುದೇ? ಹೀಗೆನ್ನಲು ಬರುವುದಿಲ್ಲ. ಅದೇ ರೀತಿಯಲ್ಲಿ ಶಿವನನ್ನು ನೆನೆಯುವ ಮನಸ್ಸು ಕಿರಿಯದಾದರೂ, ನಮ್ಮಲ್ಲಿ ತುಂಬಿರುವ ಅಂಧಕಾರವನ್ನು ಹೋಗಲಾಡಿಸಿ, ಅರಿವಿನ ಬೆಳಕನ್ನು ಮೂಡಿಸಿ, ನಮ್ಮ ಮನದ ಶಕ್ತಿಯನ್ನು ಇಮ್ಮಡಿಗೊಳಿಸುತ್ತದೆ. "ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ; ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯಾ; ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯಾ; ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯಾ,; ಕೂಡಲಸಂಗಮದೇವಾ ನಿಮ್ಮ ಶರಣರ ಅನುಭಾವದ ಬಲದಿಂದ ಎನ್ನ ಭವದ ಕೇಡು ನೋಡಯ್ಯಾ" ಎನ್ನುತ್ತಾರೆ ಬಸವಣ್ಣನವರು.

"ಸಾಂಕೇತಿಕ ಅರ್ಥದಲ್ಲಿ ಹೇಳುವುದಾರೆ ತಮಂಧ ಎನ್ನುವುದು ಅಜ್ಞಾನದ ಸಂಕೇತ. ಎಲ್ಲೆಡೆಯು ಆವರಿಸಿರುವ ತಮಂಧವನ್ನು/ಅಂಧಕಾರವನ್ನು ಅತ್ಯಂತ ಕಿರಿಯದಾದ ಜ್ಯೋತಿಯ ಬೆಳಕು ಪ್ರಕಾಶಮಯವನ್ನಾಗಿಸುತ್ತದೆ. ಅದೇರೀತಿಯಲ್ಲಿ ಮಾನವನಲ್ಲಿಯೂ ಸಹ ಅಜ್ಞಾನವು ಆವರಿಸಿಕೊಂಡಿದೆ. ಮಾನವನಿಗೆ ತನ್ನ ಅಜ್ಞಾನವೇ ಹಿರಿದಾಗಿ ಕಾಣುತ್ತದೆ. ಇದು ಅಶಾಶ್ವತವಾದದ್ದು ಎಂಬ ಮರೆವು ಆವರಿಸಿಕೊಂಡು, ಅದರ ಹಿಂದೆ ಬಿದ್ದು, ತನ್ನ ಅವನತಿಗೆ ತಾನೇ ಕಾರಣನಾಗುತ್ತಾನೆ. ಜ್ಯೋತಿ ಸ್ವರೂಪವಾದ ಶಿವನ ನೆನೆಯುವ ಮನದಿಂದ ತನ್ನ ನಿಜಸ್ವರೂಪದ ಅರಿವಿನಿಂದ ನನ್ನಲ್ಲಿ ಆವರಿಸಿರುವ ಅಜ್ಞಾನವು ಅಶಾಶ್ವತವಾದುದು ಎಂಬುದು ಮನವರಿಕೆಯಾಗಿ ನಿತ್ಯಜ್ಞಾನವುಂಟಾಗುತ್ತದೆ" ಎಂಬುದು ಬಸವಣ್ಣನವರ ನಿಲುವು.

ಮಱಹು ಘನ; ನಿಮ್ಮ ನೆನೆವ ಮನ ಕಿಱಿದೆನ್ನಬಹುದೆ? ಬಾರದಯ್ಯಾ. ಕೂಡಲಸಂಗಮದೇವಾ.

ಮಱಹು (ಮರೆವು/ಅಜ್ಞಾನ) ಹಿರಿಯದಾದರೂ ಕೂಡಲಸಂಗಮ ದೇವನನ್ನು ನೆನೆಯುವ ಮನಸ್ಸನ್ನು (ಸುಜ್ಞಾನ/ಅರಿವು) ಕಿರಿಯದು ಎನ್ನಬಹುದೇ? ಹೀಗೆನ್ನಲು ಬರುವುದಿಲ್ಲ. "ಅರಿದಡೆ ಶರಣ; ಮರೆದಡೆ ಮಾನವ" – ನಮ್ಮನ್ನು ಮಾನವತ್ವದಿಂದ ಶರಣತ್ವಕ್ಕೆ ಕರೆದುಕೊಂಡು ಹೋಗುವುದು ಶಿವಜ್ಞಾನದಿಂದ/ಅರಿವಿನಿಂದ ಕೂಡಿದ ಮನಸ್ಸು; ಮರೆವಲ್ಲ. ಆದ್ದರಿಂದ ನಾವು ಸದಾ ಸಚ್ಚಿಂತನೆ ಮಾಡುತ್ತ, ಸಜ್ಜನರ ಸದ್ಗೋಷ್ಠಿಗಳಲ್ಲಿ ಭಾಗವಹಿಸಿದರೆ ನಮ್ಮ ಮನಸ್ಸು ಆನಂದಮಯವಾಗಿ ನಮಗೆ ಹಿರಿಯದಾದ ಶಕ್ತಿಯನ್ನು

ನೀಡುತ್ತದೆ."ಶಿವಜ್ಞಾನದಿಂದ ಕೂಡಿದ ನಮ್ಮ ಮನದಲ್ಲಿ ಸದ್ವಿಚಾರಗಳು ತುಂಬಿ; ನಮ್ಮನ್ನು ಯಶಸ್ಸಿನತ್ತ ಕರೆದೊಯ್ಯುತ್ತದೆ" ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ.

ಸಾಂಕೇತಿಕ ಅರ್ಥದಲ್ಲಿ ಹೇಳುವುದಾರೆ ಮಱಹು/ ಮರೆವುಎನ್ನುವುದು ಮಾನವನಿಗೆತನ್ನ ಸ್ವಸ್ವರೂಪದ ಅರಿವು ಇಲ್ಲದಿರುವುದು."ಮನುಷ್ಯನು ಮೊದಲು ಪರಶಿವನ ಅಂಗವಾಗಿದ್ದನು. ಸಂಸಾರದಲ್ಲಿದ್ದಾಗಲೂ ಅವನು ಶಿವನ ಅಂಶ ಎಂಬುದನ್ನು ತಿಳಿಯದೆ; ತನ್ನ ಮೂಲಸ್ವರೂಪವನ್ನು ಮರೆತಿದ್ದಾನೆ. ಇದನ್ನೇ ಮಱಹು/ಮರೆವು ಎನ್ನುವುದು. ಈ ಮರೆವು ಅಥವಾ ಅವಿದ್ಯೆಯಿಂದಾಗಿ ಅವನು ತನ್ನ ಜೀವನದ ಧ್ಯೇಯಗಳನ್ನು ತಪ್ಪಾಗಿ ಭಾವಿಸಿಕೊಂಡಿದ್ದಾನೆ. ಇದರಿಂದಾಗಿ ಅವನು ಭವಚಕ್ರದಲ್ಲಿ ಸಿಕ್ಕಿಕೊಂಡಿದ್ದಾನೆ. ಸದಾತನ್ನ ಮೂಲ ಸ್ವರೂಪವನ್ನು / ಶಿವನನ್ನು ನೆನೆವುದರ (ಶಿವಧ್ಯಾನದಲ್ಲಿ ನೆಲೆಗೊಳ್ಳುವುದರ) ಮೂಲಕ ಮರೆವನ್ನುತೊಡೆದು; ಅರಿವನ್ನು ಮೂಡಿಸಿಕೊಂಡರೆ ಭವಚಕ್ರದಿಂದ ಮುಕ್ತಿಯನ್ನು ಪಡೆಯುತ್ತಾನೆ" ಎಂಬುದು ಬಸವಣ್ಣನವರ ನಿಲುವು.

□

## ಶ್ರದ್ಧಾಂಜಲಿ

### ಶ್ರೀಮತಿ ಪ್ರೇಮಕ್ಕ ಬಿಂಕದಕಟ್ಟಿ



ಪ್ರೇಮಕ್ಕ ಬಿಂಕದಕಟ್ಟಿ ಅವರು ಸಾಹಿತ್ಯ ಪೋಷಕರು, ಸಂಸ್ಕೃತಿ ಚಿಂತಕರು, ಅದ್ಭುತ ಸಂಘಟಕರು, ವಿಶ್ರಾಂತ ಶಿಕ್ಷಕಿಯಾಗಿದ್ದರು. ಗದಗ ಜಿಲ್ಲಾ ಕದಳಿ ಮಹಿಳಾ ವೇದಿಕೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದವರು. ಗದಗ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ೩೦ ವರ್ಷಗಳ ಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸಿ ದ್ದಾರೆ. ಅನೇಕ ವರ್ಷಗಳಿಂದ ಲಕ್ಷ್ಮೇಶ್ವರದಲ್ಲಿ ವೃದ್ಧಾಶ್ರಮ ನಡೆಸುವ ಮೂಲಕ ನೂರಾರು ಅನಾಥ ವೃದ್ಧರಿಗೆ ಆಶ್ರಯ ಕಲ್ಪಿಸಿದ್ದರು.

ಮಹಿಳಾ ಸಂಘಟನೆಗಳನ್ನು ಕಟ್ಟಿ, ಸಾಹಿತ್ಯ ಸಂಗೀತ, ಸತ್ಸಂಗ ಉಪನ್ಯಾಸ, ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಶ್ರಾವಣ ಸಂಜೆ, ದತ್ತಿ ಉಪನ್ಯಾಸ ಕಾರ್ಯಕ್ರಮಗಳನ್ನು ಸಂಘಟಿಸಿ ಮಹಿಳೆಯರಲ್ಲಿ ಭಾಷಣ ಕಲೆ, ನೃತ್ಯ, ಹಾಡು ಉಪನ್ಯಾಸ ನೀಡುವುದು, ಕಾರ್ಯಕ್ರಮ ನಿರ್ವಹಣೆ, ಕಾರ್ಯಕ್ರಮದ ಸಿದ್ಧತೆ ಕಲಿಸುತ್ತಿದ್ದರು. ೨೦೧೦ರಲ್ಲಿ ರಾಜ್ಯಸರ್ಕಾರ ಕೊಡಮಾಡುವ ಕಿತ್ತೂರು ಚೆನ್ನಮ್ಮ ಪ್ರಶಸ್ತಿ, ಕದಳಿಶ್ರೀ, ವಚನನಿಧಿ ಪ್ರಶಸ್ತಿ, ಅಕ್ಕಪ್ರಶಸ್ತಿ – ಹೀಗೆ ಅವರ ಸೇವೆಯನ್ನು ಗುರುತಿಸಿ ಅನೇಕ ಸಂಘ-ಸಂಸ್ಥೆಗಳು ಹಲವಾರು ಪ್ರಶಸ್ತಿ ನೀಡಿ ಗೌರವಿಸಿವೆ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಗೌರವಾಧ್ಯಕ್ಷರುಗಳು ಹಾಗೂ ಪದಾಧಿಕಾರಿಗಳು, ಗದಗ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳು, ಕದಳಿ ಮಹಿಳಾ ವೇದಿಕೆ ಸದಸ್ಯರುಗಳು ಲಿಂ. ಪ್ರೇಮಕ್ಕ ಬಿಂಕದಕಟ್ಟಿ ಅವರ ನಿಧನಕ್ಕೆ ಸಂತಾಪ ಸೂಚಿಸಿ ಕುಟುಂಬ ವರ್ಗಕ್ಕೆ ಅವರ ಅಗಲಿಕೆಯ ದುಃಖವನ್ನು ಸಹಿಸಿಕೊಳ್ಳುವ ಶಕ್ತಿಯನ್ನು ಭಗವಂತನು ದಯಪಾಲಿಸಲೆಂದು ಪ್ರಾರ್ಥಿಸಲಾಗಿದೆ.





## ಶ್ರೇಷ್ಠ ಸಂಶೋಧಕ, ಕನ್ನಡದ ಸೇನಾನಿ, ಕನ್ನಡ ಜಂಗಮ ಡಾ. ಎಂ. ಚಿದಾನಂದಮೂರ್ತಿಯವರು

### ಎಚ್.ಎಸ್. ಸಿದ್ಧಗಂಗಪ್ಪ

ಕನ್ನಡ ನಾಡು ಕಂಡ ಶ್ರೇಷ್ಠ ಸಂಶೋಧಕ, ವಿದ್ವಾಂಸ, ಕನ್ನಡವನ್ನೇ ಉಸಿರಾಡುತ್ತಿದ್ದ ಅಪ್ರತಿಮ ಕನ್ನಡ ಸೇನಾನಿ, ಸಂಶೋಧನೆ, ಸಾಹಿತ್ಯ, ಛಂದಸ್ಸು, ಶಾಸನಶಾಸ್ತ್ರ, ಭಾಷಾ ವಿಜ್ಞಾನ, ಜಾನಪದ ಗ್ರಂಥ ಸಂಪಾದನೆ, ಕರ್ನಾಟಕ ಸಂಸ್ಕೃತಿ ಕ್ಷೇತ್ರಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿದ್ದ, ಅಮೂಲ್ಯ ಗ್ರಂಥಗಳನ್ನು ರಚಿಸಿದ್ದ ಕನ್ನಡ ಜಂಗಮ, ಸರಳತೆ, ಸಜ್ಜನಿಕೆ, ಹೃದಯವಂತಿಕೆ, ಮಾನವೀಯ ಆದರ್ಶ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಜೀವನದ ಕೊನೆ ಕ್ಷಣದವರೆಗೂ ಕಾಪಾಡಿಕೊಂಡು ಬಂದಿದ್ದ ಡಾ. ಎಂ. ಚಿದಾನಂದಮೂರ್ತಿಯವರು ಜನವರಿ ೧೧, ೨೦೨೦ ರಂದು ವಿಧಿವಶರಾದುದು ಕನ್ನಡ ನಾಡು, ನುಡಿಗೆ ಭರಿಸಲಾಗದ ಅಪಾರವಾದ ನಷ್ಟ. ಅವರು ಬಿಟ್ಟು ಹೋದ ಸ್ಥಾನವನ್ನು ತುಂಬುವವರು ಯಾರು ಎಂಬುದು ನನ್ನ ಮನಸ್ಸಿನಲ್ಲಿ ಪ್ರಶ್ನೆಯಾಗಿಯೇ ಉಳಿದಿದೆ !

ನಿರಂತರ ಅಧ್ಯಯನ, ಹೊಸತನ್ನು ಕಂಡುಕೊಳ್ಳಲು ಸದಾ ಹುಡುಕಾಟ, ಹೊಸತನ್ನು ಹೇಳಬೇಕೆನ್ನುವ ತವಕ, ಆಧಾರವಿಲ್ಲದೆ ಮಾತನಾಡದ ಡಾ. ಚಿದಾನಂದಮೂರ್ತಿಯವರು ವಿದ್ವತ್ ಗಣಿಯೇ ಆಗಿದ್ದರು. ಅವರದು ಭೀಮ ಪ್ರತಿಭೆ. ಕನ್ನಡ ನಾಡು ನುಡಿಗೆ ಎಲ್ಲಿ ಅನ್ಯಾಯವಾಗುತ್ತದೆಯೋ ಅಲ್ಲಿ ಪ್ರತಿಭಟನೆಗೆ, ಚಳುವಳಿಯ ಮುಂಚೂಣಿಯಲ್ಲಿದ್ದು ಹೋರಾಟಗಾರರಿಗೆ, ಸ್ಫೂರ್ತಿಯನ್ನು, ಹೋರಾಟದ ಕಿಚ್ಚನ್ನು ಹಚ್ಚುತ್ತಿದ್ದರು.

ಶಾಸನಗಳ ಅಧ್ಯಯನಕ್ಕೆ ಒಂದು ಭದ್ರ ಬುನಾದಿಯನ್ನು ಹಾಕಿದರು. ಅಜ್ಞಾತವಾಗಿಯೇ ಉಳಿದಿದ್ದ ನೂರಾರು ಶಾಸನಗಳು ಮಾತನಾಡುವಂತೆ ಮಾಡಿದ ಶ್ರೇಷ್ಠ ಶಾಸನ ತಜ್ಞರಾಗಿ ಕರ್ನಾಟಕವಷ್ಟೇ ಅಲ್ಲ ಇಡೀ ಭಾರತದ ಶಾಸನ ತಜ್ಞರ ಗಮನ ಸೆಳೆದಿದ್ದರು. ಶಾಸನ ಅಧ್ಯಯನಕ್ಕೆ ಮಾರ್ಗದರ್ಶಕರಾಗಿದ್ದರು, ಪ್ರೇರಕ ಶಕ್ತಿಯಾಗಿದ್ದರು. ಸಂಶೋಧನೆಯನ್ನು

ನಂ. ೧೬೧೭, 'ಮಾತೃಶ್ರೀ', ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ೮ನೆ ಬ್ಲಾಕ್, ವಿಶ್ವನೀಡಂ ಅಂಚೆ,
ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧ ೯೮೪೫೫ ೬೫೮೭೧

ಒಂದು ವ್ರತವಾಗಿ ಸ್ವೀಕರಿಸಿ, ಸಂಶೋಧನಾ ಕ್ಷೇತ್ರಕ್ಕೆ ಒಂದು ವ್ಯವಸ್ಥಿತವಾದ ಅಧ್ಯಾಯದ ಪದ್ಧತಿಯನ್ನು, ನೀತಿ ನಿಯಮವನ್ನು ರೂಪಿಸಿದ್ದರು. ಸಂಶೋಧನೆಯಲ್ಲಿ ಅವರಿಗೆ ಅವರೇ ಸಾಟಿಯಾಗಿದ್ದರು.

ಕನ್ನಡ ಅಧ್ಯಾಪಕರಾಗಿ, ಬೆಂಗಳೂರು ವಿಶ್ವವಿದ್ಯಾಲಯ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಚಿದಾನಂದಮೂರ್ತಿಯವರು ವಿದ್ಯಾರ್ಥಿಗಳಿಗೆ ಪ್ರೀತಿಯ ಮೇಷ್ಟ್ರಾಗಿದ್ದರು. ಹಕ್ಕೊತ್ತಾಯ, ಜಂಗಮವಾಣಿ ಮೊದಲಾದ ಶಬ್ದಗಳ ಸೃಷ್ಟಿಕರ್ತಕರಾಗಿದ್ದರು.

ಜನನ : ಚಿದಾನಂದಮೂರ್ತಿಯವರು ಹುಟ್ಟಿದ್ದು ಮೇ ೧೦, ೧೯೩೧ ರಂದು ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಹಿರೇಕೋಗಲೂರುನಲ್ಲಿ ಜನಿಸಿದರು. ಶಿವಮೊಗ್ಗ ಜಿಲ್ಲೆ ಅನೇಕ ಪ್ರತಿಭಾವಂತ ವಿದ್ವಾಂಸರನ್ನು ಕೊಟ್ಟ ಜಿಲ್ಲೆ. ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಾ. ಹಾ.ಮಾ. ನಾಯಕ ಮೊದಲಾದವರ ಸಾಲಿಗೆ ಡಾ. ಎಂ. ಚಿದಾನಂದಮೂರ್ತಿಯವರು ಸೇರುತ್ತಾರೆ. ಹಡೆದ ಪುಣ್ಯಜೀವಿಗಳು ತಂದೆ ಕೊಟ್ರಯ್ಯ, ತಾಯಿ ಪಾರ್ವತಮ್ಮ. ತಂದೆ ಹಳ್ಳಿಯ ಮಠದ ಜಂಗಮರಾಗಿದ್ದರು. ತಾಯಿ ಪಾರ್ವತಮ್ಮ ಪುಟ್ಟ ಕಂದನನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವಾಗ ಹಾಡುತ್ತಿದ್ದ ಹಾಡು "ಆಚಾರಕ್ಕರಸಾಗು ನೀತಿಗೆ ಪ್ರಭುವಾಗು, ಮಾತಿನಲಿ ಚೂಡಾಮಣಿಯಾಗು ಕಂದಯ್ಯ, ಜ್ಯೋತಿಯೇ ಆಗು ಜಗಕ್ಕೆಲ್ಲ" ಎಂದು ಇಷ್ಟದೈವವನ್ನು ಭಕ್ತಿಯಿಂದ ಸ್ಮರಿಸುತ್ತಾ ಹಾಡುತ್ತಿದ್ದ ಹಾರೈಕೆಯ ಹಾಡು ಸುಳ್ಳಾಗಲಿಲ್ಲ ! ಮುಂದೆ ಬೆಳೆಯುತ್ತಾ ಜ್ಞಾನದ ಜ್ಯೋತಿ ಯಾದರು. ಮಾನವೀಯ ಮೌಲ್ಯಗಳ ಸಾಕಾರಮೂರ್ತಿ ಯಾದರು. ಬಸವಣ್ಣನವರ ಆದರ್ಶಗಳನ್ನು ಮೈಗೂಡಿಸಿ ಕೊಂಡರು ಅಂತರಂಗ ಹಾಗೂ ಬಹಿರಂಗಗಳೆರಡರಲ್ಲೂ ಏಕತಾನತೆಯನ್ನು ಕಾಪಾಡಿಕೊಂಡು ಬಂದರು. ಬಾಲ್ಯದಲ್ಲಿ ಹಾಕುತ್ತಿದ್ದ ಸ್ವಚ್ಛವಾದ ಉಡುಪಿನಂತೆಯೇ ಅಂತರಂಗದಲ್ಲೂ ಶುಭ್ರತೆಯನ್ನು ಕಾಪಾಡಿಕೊಂಡು ಬಂದ ಡಾ. ಎಂ. ಚಿದಾನಂದಮೂರ್ತಿಯವರು ಎಲ್ಲರನ್ನು ಪ್ರೀತಿ, ವಿಶ್ವಾಸ, ಗೌರವದಿಂದ ಕಾಣುತ್ತಿದ್ದರು.

ಶಿಕ್ಷಣ : ಪ್ರಾಥಮಿಕ ಶಿಕ್ಷಣವನ್ನು ಹುಟ್ಟಿದೂರಿನಲ್ಲಿ ಮುಗಿಸಿ, ಮಾಧ್ಯಮಿಕ ಶಿಕ್ಷಣವನ್ನು ಸಂತೆಬೆನ್ನೂರಿನಲ್ಲಿ ಪಡೆದು, ಚನ್ನಗಿರಿಯಲ್ಲಿ ಪಬ್ಲಿಕ್ ಪರೀಕ್ಷೆಯಲ್ಲಿ ಕುಳಿತು ಮೊದಲ ದರ್ಜೆಯಲ್ಲಿ ಉತ್ತೀರ್ಣರಾದರು. ದಾವಣಗೆರೆಯಲ್ಲಿ ಇಂಟರ್‌ಮೀಡಿಯೇಟ್ ಕಾಲೇಜಿಗೆ ಸೇರಿ ರ್‍ಯಾಂಕ್‌ನೊಂದಿಗೆ ಹೆತ್ತವರಿಗೆ, ಹುಟ್ಟಿದೂರಿಗೆ ಗೌರವವನ್ನು ತಂದುಕೊಟ್ಟರು. ಅವರು ಇಂಟರ್‌ಮೀಡಿಯೇಟ್‌ನಲ್ಲಿ ಆರಿಸಿಕೊಂಡ ವಿಷಯ ಗಣಿತ ಮತ್ತು ವಿಜ್ಞಾನ. ಆದರೆ ಆ ವೇಳೆಗೆ ಅವರಿಗೆ ಕನ್ನಡದ ಸೆಳೆತ, ಅಸಕ್ತಿಯಿಂದಾಗಿ ಮೈಸೂರು ಮಹಾರಾಜ ಕಾಲೇಜಿಗೆ ಕನ್ನಡ ಆನರ್ಸ್ ವಿದ್ಯಾರ್ಥಿಯಾಗಿ ಸೇರಿದುದು ಅನೇಕ ಜನರಿಗೆ ಸೋಜಿಗದ ಸಂಗತಿಯಾಗಿತ್ತು.

ಚಿನ್ನದ ಪದಕದೊಂದಿಗೆ ಪ್ರಥಮ ರ್‍ಯಾಂಕ್‌ನೊಂದಿಗೆ ಉತ್ತೀರ್ಣರಾದರು. ಸಾಹಿತ್ಯ ದಿಗ್ಗಜಗಳಾದ ತೀ.ನಂ.ಶ್ರೀ., ಎಲ್. ಬಸವರಾಜು, ಜಿ.ಎಸ್. ಶಿವರುದ್ರಪ್ಪನವರು





ಚಿದಾನಂದಮೂರ್ತಿಯವರ ಗುರುಗಳಾಗಿದ್ದರು. ಬಾಲ್ಯದಿಂದಲೂ ಸಾತ್ವಿಕ ಗುಣವನ್ನು ಮೈಗೂಡಿಸಿ ಕೊಂಡಿದ್ದ ಚಿದಾನಂದಮೂರ್ತಿಯವರಿಗೆ ಕನ್ನಡ ಅಧ್ಯಾಪಕನಾಗಿ ಪಾಠ ಹೇಳಬೇಕು, ಸರಳವಾದ, ಆದರ್ಶ ಮಯವಾದ ಸಾತ್ವಿಕ ಜೀವನವನ್ನು ನಡೆಸಬೇಕೆಂಬ ಕನಸಿನ ಸಾಕಾರಕ್ಕಾಗಿ ಬಿ.ಎ. ಆನರ್ಸ್‌ಗೆ ಸೇರಿದರು.

ವೃತ್ತಿಜೀವನ : ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ವೃತ್ತಿಜೀವನವನ್ನು ಆರಂಭಿಸಿದ ಚಿದಾನಂದಮೂರ್ತಿಯವರು ಎರಡು ವರ್ಷಗಳ ಕಾಲ ಬೆಂಗಳೂರು, ತುಮಕೂರು, ಕೋಲಾರದ ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮೂರ್ತಿಯವರು ತಮ್ಮೊಳಗಿನ ಜ್ಞಾನದ ಹಸಿವನ್ನು ತಣಿಸಲು ವೃತ್ತಿಗೆ ವಿದಾಯ ಹೇಳಿ ಮೈಸೂರಿನತ್ತ ಮುಖ ಮಾಡಿದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಪದವಿಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದ ಪ್ರತಿಭಾವಂತರು. ವಿದ್ವತ್ ಗಣಿಯಾಗಿದ್ದು, ಡಾ. ಕುವೆಂಪು, ಡಿ.ಎಲ್. ನರಸಿಂಹಾಚಾರ್ಯ, ತ.ಸು. ಶಾಮರಾವ್, ಕ.ವೆಂ. ರಾಘವಾಚಾರ್ಯ, ಎಸ್. ಶ್ರೀಕಂಠಶಾಸ್ತ್ರಿಗಳಂತಹ ಗುರುಗಳನ್ನು ಪಡೆದ ನಾನು ನಿಜಕ್ಕೂ ಧನ್ಯ ಎಂದು ಹೇಳುತ್ತಿದ್ದ ವಿನಮ್ರ ಶಿಷ್ಯರಾಗಿದ್ದರು. ಅವರ ಗುರು ಶಿಷ್ಯ ಸಂಬಂಧ ಹಾಲು ಜೇನು ಬೆರೆತಂತಿತ್ತು.

೧೯೫೭ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಯುವರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ ಮತ್ತು ವೃತ್ತಿಜೀವನ ಆರಂಭಿಸಿದ ಚಿದಾನಂದಮೂರ್ತಿಯವರು ೧೯೬೦ ರಲ್ಲಿ ಮಾನಸ ಗಂಗೋತ್ರಿಯಲ್ಲಿ ಸ್ನಾತಕೋತ್ತರ ಕನ್ನಡ ವಿಭಾಗದ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಅವರು ಕನ್ನಡ ಸಾಹಿತ್ಯವನ್ನು ಬರಿ ಸಾಹಿತ್ಯವಾಗಿ ಅಧ್ಯಯನ ಮಾಡಲಿಲ್ಲ. ಕನ್ನಡ ನಾಡಿನ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಕಟ್ಟುವ ಒಂದು ಮೂಲದ್ರವ್ಯವಾಗಿ ಪರಿಗಣಿಸಿದರು. ನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೯೦ ಅಕ್ಟೋಬರ್ ೧೦ ರಂದು ಕನ್ನಡ ಕೆಲಸಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಳ್ಳಲು ಸ್ವಯಂ ನಿವೃತ್ತಿ ಹೊಂದಿದ ಕನ್ನಡದ ವೀರ ಸೇನಾನಿ.

'ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ' ಅವರು ಮಂಡಿಸಿದ ಮಹಾಪ್ರಬಂಧಕ್ಕೆ ೧೯೬೪ರಲ್ಲಿ ಪಿ.ಎಚ್‌ಡಿ ಪದವಿಯನ್ನು ಪಡೆದರು. ಈ ಮಹಾಪ್ರಬಂಧ ಶಾಸನಗಳ ಬಗ್ಗೆ ಸಂಶೋಧನೆ ಮಾಡುವವರಿಗೆ ಮಾರ್ಗದರ್ಶಿಯಾಯಿತು. ಅವರು ಯಾವುದೇ ವಿಷಯವನ್ನು ಕುರಿತು ಬರೆಯಲಿ ತಲಸ್ಪರ್ಶಿ ಅಧ್ಯಯನ ಮಾಡಿ ವಿಚಾರಗಳನ್ನು ದಾಖಲಿಸುತ್ತಿದ್ದರು. ಹಾಗಾಗಿ ಅವರು ಬರೆದ ೪೦೦ಕ್ಕೂ ಹೆಚ್ಚು ಪ್ರಬಂಧಗಳು ಮೌಲಿಕವಾಗಿವೆ, ಆಕರಗಳಾಗಿವೆ.

ಡಾ. ಎಂ. ಚಿದಾನಂದಮೂರ್ತಿಯವರದು ಬಹುಮುಖ ಪ್ರತಿಭೆ. ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ವಿಫುಲವಾದ ಅಧ್ಯಯನ ಮಾಡಿ ಗ್ರಂಥಗಳನ್ನು ರಚಿಸಿದ್ದಾರೆ. ಕವಿರಾಜಮಾರ್ಗ, ಶೂನ್ಯ ಸಂಪಾದನೆ, ವಚನ ಸಾಹಿತ್ಯ, ಜಾನಪದ, ಭಾಷಾ ವಿಜ್ಞಾನ ಹೀಗೆ ಹಲವು ಪ್ರಕಾರಗಳು ಅವರ ಆಸಕ್ತಿ ಕ್ಷೇತ್ರಗಳಾಗಿದ್ದವು.

ಸಾಹಿತ್ಯ ಕ್ಷೇತ್ರ : ಶೂನ್ಯ ಸಂಪಾದನೆಯನ್ನು ಕುರಿತು, ಭಾಷಾ ವಿಜ್ಞಾನದ ಮೂಲ ತತ್ತ್ವಗಳು, ಸಂಶೋಧನ ತರಂಗ, ವಚನ ಸಾಹಿತ್ಯ, ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು, ಗ್ರಾಮೀಣ, ವಾಗರ್ಥ, ಪೂರ್ಣ ಸೂರ್ಯಗ್ರಹಣ, ಛಂದೋತರಂಗ, ಪಗರಣ ಮತ್ತು ಇತರ ಸಂಪ್ರಬಂಧಗಳು, ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಸಂಗೀತ ವಿಚಾರ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಲಿಂಗಾಯತ ಅಧ್ಯಯನಗಳು, ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ, ಕರ್ನಾಟಕ ಸಂಸ್ಕೃತಿ, ವಚನ ಶೋಧ, ಹೊಸತು ಹೊಸತು, ಕನ್ನಡಾಯಣ, ಬಸವಣ್ಣನವರು, ವೀರಶೈವ ಧರ್ಮ ಮತ್ತು ಭಾರತೀಯ ಸಂಸ್ಕೃತಿ, ಬಸವಣ್ಣ (ಆಂಗ್ಲ), ಗೋವು–ಗೋಮಾತೆ, ಗೋಹತ್ಯಾ ನಿಷೇಧ ಕಾನೂನು, 'ಕರ್ನಾಟಕದ ನಾಡಗೀತೆ' ಒಂದು ವಿಶ್ಲೇಷಣೆ, ಶಿವಾಜಿ–ಮಲ್ಲಮ್ಮಾಜಿ ಸಮರೋತ್ಸವ, ಯುಗದ ಉತ್ಸಾಹ, (ಬದುಕು, ವಚನ, ಬಯಲು), ಭಾಷಿಕ ಬೃಹತ್ ಕರ್ನಾಟಕ, ಕರ್ನಾಟಕ–ನೇಪಾಳ–ಸಾಂಸ್ಕೃತಿಕ ಸಂಬಂಧ, ಹಂಪಿ ಉಳಿಸಿ – ಭಾರತ ಉಳಿಸಿ, ಯುಗದ ಉತ್ಸಾಹ ಬಸವಣ್ಣ, ಮತಾಂತರ ನಿಷೇಧ ಕಾನೂನು ಸೇರಿದಂತೆ ೭೫ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಇವುಗಳ ಜೊತೆಗೆ ಶ್ರೀಕಂಠತೀರ್ಥ, ಭೂಷಣ, ಅಧ್ಯಯನ ಗ್ರಂಥಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ. ಕನ್ನಡ ಸಂಸ್ಕೃತಿ, ಬಸವಣ್ಣನವರ ಕೃತಿಗಳು ಕನ್ನಡದಿಂದ ತಮಿಳು, ಬೆಂಗಾಳಿ, ಮರಾಠಿ ಭಾಷೆಗಳಿಗೆ ಅನುವಾದಗೊಂಡಿವೆ.

ಚಳುವಳಿಯ ಮುಂಚೂಣಿಯಲ್ಲಿ : ಸದಾ ಸಂಶೋಧನೆ, ಅಧ್ಯಯನ, ಬೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಡಾ. ಚಿದಾನಂದಮೂರ್ತಿಯವರಿಗೆ ಒಂದು ಅನಿರೀಕ್ಷಿತವಾಗಿ ಮನಸ್ಸನ್ನು ಕ್ಷೋಭೆಗೊಳಿಸಿದ ಒಂದು ಘಟನೆ ಕನ್ನಡದ ಪರ, ಕನ್ನಡಿಗರ ಪರ ಹೋರಾಟ ಮಾಡಲು ಪ್ರೇರಣೆ ನೀಡಿತು. ಆ ಘಟನೆಯಾದರೂ ಏನು! ಒಮ್ಮೆ ತಮ್ಮ ಕುಟುಂಬದೊಂದಿಗೆ ಬೆಂಗಳೂರಿನ ರೆಕ್ಸ್ ಚಿತ್ರಮಂದಿರದಲ್ಲಿ ಇಂಗ್ಲಿಷ್‌ನ 'ಬಸ್' ಎಂಬ ಮಕ್ಕಳ ಸಿನಿಮಾ ನೋಡಲು ಹೋಗಿದ್ದರು. ಟಿಕೆಟ್ ಕೊಡುವಂತೆ ಕೌಂಟರ್‌ನಲ್ಲಿ ಕುಳಿತವನಿಗೆ ಕನ್ನಡದಲ್ಲಿಯೇ ಕೇಳಿದರು. ಅವನು ಇವರ ಮಾತು ಕೇಳಿ ರೇಗಿದ. ಅವರಿಗೆ ಗೌರವ ಕೊಡದೆ ಹೊರದಬ್ಬಿಸಿದ. ಆದರೆ ಅಲ್ಲಿದ್ದ ಯಾವ ಕನ್ನಡಿಗನೂ ಇವರ ಪರವಹಿಸಲಿಲ್ಲ. ಚಿದಾನಂದಮೂರ್ತಿ ಯವರು ಅವಮಾನದಿಂದ ಕುಗ್ಗಿ ಹೋದರು. ಈ ಘಟನೆ ಅವರಲ್ಲಿ ಹೋರಾಟದ ಕಿಚ್ಚು ಹತ್ತಿಸಿತು. ಅವರು ಸುಮ್ಮನೆ ಕೂಡಲಿಲ್ಲ. ಪತ್ರಿಕೆಗಳ ವಾಚಕರವಾಣಿಗೆ ಪತ್ರ ಬರೆದರು. ಎಂ.ಜಿ. ರಸ್ತೆಯ ಗಾಂಧಿ ಪ್ರತಿಮೆಯ ಮುಂದೆ ಧರಣಿ ಕುಳಿತರು. ಕನ್ನಡಿಗರು ಈ ಬಗ್ಗೆ ಚಿಂತನೆ ಮಾಡಲು ಪ್ರೇರೇಪಿಸಿದರು.

ಗೋಕಾಕ್ ಚಳವಳಿಯಲ್ಲಿ ಚಿದಾನಂದಮೂರ್ತಿಯವರು ಸಕ್ರಿಯವಾಗಿ ಪಾಲುಗೊಂಡರು. ಸಾಹಿತಿಗಳು ಹಾಗೂ ಕಲಾವಿದರ ಬಳಗದ ಪ್ರಧಾನ ಸಂಚಾಲಕರಾಗಿ ಬದ್ಧತೆಯಿಂದ ದುಡಿದರು. ಸಾಹಿತಿಗಳನ್ನು ಒಟ್ಟು ಗೂಡಿಸಲು ಅಪಾರವಾಗಿ ಶ್ರಮಿಸಿದರು.





ಹಲವಾರು ಕಾರ್ಯಯೋಜನೆಗಳನ್ನು ಹಮ್ಮಿಕೊಂಡು ಅವುಗಳನ್ನು ಅನುಷ್ಠಾನಗೊಳಿಸಲು ಪ್ರಾಮಾಣಿಕವಾಗಿ ದುಡಿದರು. ಶಿಕ್ಷಣದ ಮಾಧ್ಯಮದಲ್ಲಿ ಕನ್ನಡ, ಕನ್ನಡಿಗರು ಎದುರಿಸುತ್ತಿರುವ ಉದ್ಯೋಗ ಸಮಸ್ಯೆ, ಸರೋಜಿನಿ ಮಹಿಷಿ ವರದಿ ಜಾರಿಗೆ ಅಗ್ರಹಿಸಿ ೪೯ ದಿನಗಳ ಕಾಲ ಉಪವಾಸ ಸತ್ಯಾಗ್ರಹ ಮಾಡಿದುದು ಅವರೊಳಗಿನ ಕನ್ನಡ ಪರ ಬದ್ಧತೆಗೆ, ಕಳಕಳಿಗೆ ನಿದರ್ಶನ. ಇದೊಂದು ಅವಿಸ್ಮರಣೀಯ ದಾಖಲೆ. ಅವರು ಯಾವುದೇ ಚಳವಳಿ ಯಲ್ಲಿ ಭಾಗವಹಿಸಲಿ, ಅದಕ್ಕೊಂದು ಚೈತನ್ಯ, ಸ್ಫೂರ್ತಿ ತುಂಬುತ್ತಿದ್ದರು. ಕನ್ನಡ ಮಾಧ್ಯಮ, ಕನ್ನಡ ಶಾಲೆ, ಕನ್ನಡಿಗರಿಗೆ ಉದ್ಯೋಗ, ಕರ್ನಾಟಕದ ನೆಲ ಜಲಗಳ ಸಂರಕ್ಷಣೆಗೆ ನಿರಂತರವಾಗಿ ಹೋರಾಡಿದರು. ಈ ವಿಚಾರ ಗಳಲ್ಲಿ ಅವರದ್ದು ರಾಜೀ ರಹಿತ ಬದ್ಧತೆಯಾಗಿತ್ತು, ಕಳಕಳಿ ಯಾಗಿತ್ತು. ಈ ನಾಡಿನಲ್ಲಿ ಕನ್ನಡಿಗರೇ ಸಾರ್ವಭೌಮರು ಎನ್ನುವುದನ್ನು ಅವರು ಜೀವನದುದ್ದಕ್ಕೂ ಪ್ರತಿಪಾದಿಸಿದರು, ಬೀದಿಗಿಳಿದು ಹೋರಾಟ ನಡೆಸಿದರು. ಕನ್ನಡ ಶಕ್ತಿಕೇಂದ್ರವನ್ನು ಸ್ಥಾಪಿಸಿ ಅದಕ್ಕೆ ಶಕ್ತಿಯನ್ನು ತುಂಬಿದರು. ನೈರುತ್ಯ ರೈಲ್ವೆ, ಕಾವೇರಿ ಹೋರಾಟವೂ ಸೇರಿದಂತೆ ೧೯೮೨ ರಿಂದ ೨೦೨೦ ರವರೆಗೆ ನಡೆದ ಎಲ್ಲಾ ಚಳವಳಿ ಗಳಲ್ಲಿ ಅವರು ವಹಿಸಿದ ಪಾತ್ರ ಗಮನಾರ್ಹವಾದುದು.

ಕನ್ನಡ ವಿಶ್ವವಿದ್ಯಾಲಯದ ರೂವಾರಿ :

ಡಾ. ಎಂ. ಚಿದಾನಂದಮೂರ್ತಿಯವರ ಹಲವು ಹೆಬ್ಬಯಕೆಗಳಲ್ಲಿ ಕನ್ನಡಕ್ಕಾಗಿಯೇ ಒಂದು ವಿಶ್ವವಿದ್ಯಾಲಯವಿರಬೇಕೆಂಬುದಾಗಿತ್ತು. ಅದಕ್ಕಾಗಿಯೇ ಅವರು ಕಾರ್ಯರೂಪಕ್ಕೆ ಬರುವಂತೆ ಮಾಡಲು ಶ್ರೀ ಸಿದ್ಧಗಂಗಾ ಮಠದಿಂದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಪಡೆದು ೧೯೮೫ರಲ್ಲಿ ಹಂಪೆಯವರೆಗೆ ೪೧ ದಿನಗಳ ಕಾಲ ಪಾದಯಾತ್ರೆ ಮಾಡಿ ಕನ್ನಡದ ವಿಶ್ವವಿದ್ಯಾಲಯದ ಸ್ಥಾಪನೆಗೆ ಆಗ್ರಹಪಡಿಸಿದರು. ಅವರು ಯಾವುದೇ ಕೆಲಸವನ್ನು ಪ್ರಾರಂಭಿಸಲಿ ಅದು ಅನುಷ್ಠಾನ ಗೊಳಿಸುವವರೆಗೂ ನಿರಂತರವಾಗಿ ಹೋರಾಟ ನಡೆಸುವುದನ್ನು ಬಿಡುತ್ತಿರಲಿಲ್ಲ. ಸಾಹಿತಿಗಳು, ಕಲಾವಿದರ ಬಳಗದ ಮೂಲಕ ಆಗಿನ ಮುಖ್ಯಮಂತ್ರಿ, ಸಚಿವ ಸಂಪುಟ, ಶಾಸಕರ ಮೇಲೆ ಒತ್ತಾಯ ತಂದು ಅದರ ಸ್ಥಾಪನೆಗೆ ಕಾರಣರಾಗಿದ್ದುದನ್ನು ಕನ್ನಡಿಗರೂ ಎಂದೂ ಮರೆಯುವುದಿಲ್ಲ. ಅವರು ಕೊಟ್ಟು ಬಿಟ್ಟು ಹೋದ ಸಾಧನೆಗಳು ಒಂದೇ, ಎರಡೇ! ನಾಡಿನಲ್ಲಿ ಕನ್ನಡಕ್ಕೆ ಅಗ್ರಸ್ಥಾನ, ಪ್ರೌಢಶಾಲೆಯಲ್ಲಿ ಕನ್ನಡ ವಿಷಯಕ್ಕೆ ೧೨೫ ಅಂಕಗಳ ನಿಗದಿ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸ್ಥಾಪನೆಗಳಲ್ಲಿ ಅವರ ಹೋರಾಟದ ಶಕ್ತಿ ಇದೆ, ಪರಿಶ್ರಮವಿದೆ.

ಕನ್ನಡ ಭಾಷೆ, ನಾಡು, ಸಂಸ್ಕೃತಿಯ ಬಗ್ಗೆ ಅವರಿಗಿದ್ದ ಬದ್ಧತೆ, ಕಳಕಳಿ, ಶ್ರದ್ಧೆ, ಸಂಕಲ್ಪಕ್ಕೆ ಎಣೆ ಇರಲಿಲ್ಲ. ಕನ್ನಡಿಗರಲ್ಲಿ ಕನ್ನಡ ನಾಡು, ನುಡಿ ಸಂಸ್ಕೃತಿಯ ಬಗ್ಗೆ ಎಚ್ಚರ ಮತ್ತು ಅಭಿಮಾನವನ್ನು ಮೂಡಿಸಲು ೬೦ರ ದಶಕದಲ್ಲಿ ಅವರು ತುಂಗಭದ್ರ ನದಿಯಲ್ಲಿ

ಆತ್ಮಾರ್ಪಣೆ ಮಾಡಿಕೊಳ್ಳಲು ಮುಂದಾಗಿದ್ದರು. ಕನ್ನಡದ, ಕನ್ನಡಿಗರ ಸುದೈವ ಬದುಕುಳಿದಿದ್ದರು.

ವಿದೇಶ ಪ್ರವಾಸ : ಅಮೇರಿಕಾ, ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಗ್ರೀಸ್, ಜಪಾನ್ ಸೇರಿದಂತೆ ಹಲವಾರು ದೇಶಗಳಲ್ಲಿ ಪ್ರವಾಸ ಮಾಡಿ ಅಲ್ಲಿ ವಿಶ್ವವಿದ್ಯಾಲಯದ ವಿದ್ವಾಂಸರಿಗೆ ತಮ್ಮಲ್ಲಿನ ಅಗಾಧವಾದ ವಿದ್ವತ್ತನ್ನು ಪರಿಚಯ ಮಾಡಿಕೊಟ್ಟಿದ್ದರು. ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದುಕೊಂಡು ಭಾಷಾ ವಿಜ್ಞಾನದಲ್ಲಿ ಪೋಸ್ಟ್ ಡಾಕ್ಟರೇಟ್ ಅಧ್ಯಯನ ಮಾಡಿದ್ದರು. ಸ್ವಾನ್ ವಿಶ್ವವಿದ್ಯಾಲಯದಲ್ಲಿ ೪ನೇ ಅಂತರಾಷ್ಟ್ರೀಯ ಐತಿಹಾಸಿಕ ಭಾಷಾ ವಿಜ್ಞಾನ ಸಮ್ಮೇಳನದ ಗೋಷ್ಠಿಯ ಅಧ್ಯಕ್ಷತೆಯ ಗೌರವಕ್ಕೆ ಭಾಜನರಾಗಿದ್ದರು. ಅಲ್ಲದೆ ತಿರುವನಂತಪುರದ ದ್ರಾವಿಡ ಭಾಷಾ ವಿಜ್ಞಾನ ಸಂಸ್ಥೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಗೌರವಕ್ಕೆ ಪಾತ್ರರಾಗಿದ್ದರು.

ಪ್ರಶಸ್ತಿ ಗೌರವಗಳು : ಡಾ. ಚಿದಾನಂದಮೂರ್ತಿ ಯವರು ಸಂಶೋಧನೆ, ಸಾಹಿತ್ಯ, ಭಾಷಾ ವಿಜ್ಞಾನ, ಇತಿಹಾಸ, ಶಾಸನ, ಜಾನಪದ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಮನಗೊಂಡ ಸರ್ಕಾರ, ಸಂಘ ಸಂಸ್ಥೆಗಳು, ಮಠ ಮಾನ್ಯಗಳು ಪ್ರಶಸ್ತಿ ನೀಡಿ, ಸನ್ಮಾನಿಸಿ ಗೌರವಿಸಿವೆ. ಅವರು ಪಡೆದ ಕೆಲವು ಪ್ರತಿಷ್ಠಿತ ಪ್ರಶಸ್ತಿಗಳನ್ನು ಹೆಸರಿಸುವುದಾದರೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತು ವಜ್ರಮಹೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ, ಸಿದ್ಧಗಂಗಾಶ್ರೀ ಪ್ರಶಸ್ತಿ, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಕನ್ನಡ ಕುಲತಿಲಕ ಪ್ರಶಸ್ತಿ, ಪ್ರೊ. ಮಾಳವಾಡ ಪ್ರಶಸ್ತಿ, ಪ್ರೊ. ಭೂಷನೂರಮಠ ಪ್ರಶಸ್ತಿ, ಶ್ರೀಕೃಷ್ಣದೇವರಾಯ ಪ್ರಶಸ್ತಿ, ಅ.ನ.ಕೃ. ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಉಡುಪಿ ಶ್ರೀಕೃಷ್ಣ ಪ್ರಶಸ್ತಿ, ಅರವಿಂದ ಜೋಷಿ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಸಿರಿಗನ್ನಡ ರಾಷ್ಟ್ರೀಯ ಸಾಹಿತ್ಯರತ್ನ ಪ್ರಶಸ್ತಿ, ವಿಶ್ವಚೇತನ ಪ್ರಶಸ್ತಿ, ಆಳ್ವಾಸ್ ನುಡಿಸಿರಿ ಪ್ರಶಸ್ತಿ, ಡಾ. ಎಚ್. ನರಸಿಂಹಯ್ಯ ಪ್ರಶಸ್ತಿ, ಕಾಯಕಶ್ರೀ ಪ್ರಶಸ್ತಿ, ಕಾವೇರಿ ಪ್ರಶಸ್ತಿ, ಬಸವಶ್ರೀ ಸಾಹಿತ್ಯ ಪ್ರಶಸ್ತಿ, ಹುಯಿಲುಗೋಳ ನಾರಾಯಣರಾವ್ ಸ್ಮಾರಕ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, Eminent son of Kannada ಪ್ರಶಸ್ತಿ, ಇಂಗ್ಲೆಂಡಿನ ಕೇಂಬ್ರಿಡ್ಜ್ International Biographical Center ಸಂಸ್ಥೆಯ International Man of the Year ೧೯೯೬–೯೭ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳಿಗೆ ಭಾಜನರಾದ ಶ್ರೇಷ್ಠ ವಿದ್ವಾಂಸ ಡಾ. ಎಂ. ಚಿದಾನಂದಮೂರ್ತಿಯವರು. ಆದರೆ ಇಂಥ ಶ್ರೇಷ್ಠ ವಿದ್ವಾಂಸರನ್ನು, ಕನ್ನಡಪರ ಹೋರಾಟಗಾರರನ್ನು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡದೇ ಇದ್ದುದು ಕನ್ನಡ ಸಾಹಿತ್ಯ ಪರಿಷತ್ತಿನ ಇತಿಹಾಸದಲ್ಲಿ ಒಂದು ಕಪ್ಪುಚುಕ್ಕೆ ಇದ್ದಂತೆ.





ಶ್ರೀ ಸಿದ್ಧಗಂಗಾ ಮಠದೊಂದಿಗೆ ಅವಿನಾಭಾವ ಸಂಬಂಧ : ಡಾ. ಎಂ. ಚಿದಾನಂದಮೂರ್ತಿಯವರು ನಾಡಿನ ಪುಣ್ಯಕ್ಷೇತ್ರವಾದ ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ಕರ್ನಾಟಕ ರತ್ನ, ತ್ರಿವಿಧ ದಾಸೋಹಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿದ್ದರು, ಏಪ್ರಿಲ್ ೨೪, ೨೦೧೧ ರಂದು ಶ್ರೀಮಠದಲ್ಲಿ ನಡೆದ ಪರಮಪೂಜ್ಯ ಶ್ರೀ ಶ್ರೀಗಳವರ ೧೦೪ನೇ ಜನ್ಮದಿನೋತ್ಸವ ಹಾಗೂ ಗುರುವಂದನ ಸಮಾರಂಭದಲ್ಲಿ ಡಾ. ಎಂ. ಚಿದಾನಂದಮೂರ್ತಿ ಯವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಅವರು ಈ ಸಂದರ್ಭದಲ್ಲಿ

ಕೃತಜ್ಞತಾ ನುಡಿಗಳನ್ನಾಡಿ "ತಮ್ಮ ಜೀವನದಲ್ಲಿ ಇಂದು ಸುದಿನ. ಪವಿತ್ರ ಪುಣ್ಯಕ್ಷೇತ್ರವಾದ ಶ್ರೀ ಸಿದ್ಧಗಂಗಾ ಮಠದಲ್ಲಿ ಪರಮಪೂಜ್ಯ ಶ್ರೀಗಳವರಿಂದ ಪ್ರಶಸ್ತಿಯನ್ನು ಸ್ವೀಕರಿಸಿ ಅವರ ಆಶೀರ್ವಾದ ಪಡೆಯುತ್ತಿರುವುದು ನನ್ನ ಪೂರ್ವಾರ್ಜಿತ ಪುಣ್ಯ ಎಂದು ಭಾವಿಸಿದ್ದೇನೆ. ಇದುವರೆಗೆ ತಾನು ಪಡೆದ ಪ್ರಶಸ್ತಿಗಳೆಲ್ಲಕ್ಕಿಂತ ಈ ಪ್ರಶಸ್ತಿ ಕಿರೀಟ ಪ್ರಾಯವಾದುದು" ಎಂದು ಕೃತಜ್ಞತೆಗಳನ್ನು ಸಲ್ಲಿಸಿದುದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

ಡಾ. ಎಂ. ಚಿದಾನಂದಮೂರ್ತಿ ಯವರು ಲೇಖನವೊಂದರಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು "ಕರ್ನಾಟಕದ ಇಂದಿನ ಸುಪ್ರಸಿದ್ಧ ಪೀಠಾಧ್ಯಕ್ಷರಲ್ಲಿ ಅತ್ಯಂತ ಹಿರಿಯರಾದ ಸಿದ್ಧಗಂಗಾ ಕ್ಷೇತ್ರದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರನ್ನು ನಾನು ಹತ್ತಿರದಿಂದ ಬಲ್ಲೆ ಎಂದು ಹೇಳಿಕೊಳ್ಳುವುದರಲ್ಲಿ ನನಗೊಂದು ಸಕಾರಣ ಹೆಮ್ಮೆ ಇದೆ. ಅವರು ಮಾಡುತ್ತಿರುವ ಕಾರ್ಯಗಳು, ಅವರ ಚಿಂತನೆಯ ಹಾದಿ ಇವು ನನ್ನನ್ನು ಚಕಿತಗೊಳಿಸಿದೆ. ಉತ್ಪ್ರೇಕ್ಷೆಯಿಲ್ಲದೆ ಹೇಳುತ್ತೇನೆ ಇಂದಿನ ವೀರಶೈವ ಪೀಠಾಧ್ಯಕ್ಷರಲ್ಲಿ ಅವರು ವಯಸ್ಸಿನಲ್ಲಿ ಮಾತ್ರವಲ್ಲದೆ ಪ್ರಬುದ್ಧತೆಯಲ್ಲೂ ಅವರನ್ನು ಸರಿಗಟ್ಟುವವರು, ಅವರ ಸಮೀಪದಲ್ಲೂ ನಿಲ್ಲಬಲ್ಲವರು ಕಡಿಮೆ ಮಾತ್ರವಲ್ಲ, ಯಾರೂ ನನಗೆ ಕಾಣಿಸುತ್ತಿಲ್ಲ. ವೀರಶೈವರು ಹಿಂದೂಗಳು ಹೌದೇ ಅಲ್ಲವೇ ಎಂಬ ವಿಷಯವೇ ಆಗಲಿ, ವೀರಶೈವರೇ ಬೇರೆ, ಲಿಂಗಾಯಿತರೇ ಬೇರೆ ಎಂಬ ವಿಷಯವೇ ಆಗಲಿ, ಅಂತಹ ಸಮಯಗಳಲ್ಲಿ ಅವರು ದಿಟ್ಟವಾಗಿ ನ್ಯಾಯಪರ ನಿಂತಿದ್ದಾರೆ. "ವೀರಶೈವ ಧರ್ಮ ಹಿಂದೂ ಧರ್ಮದ ಅರ್ಥಾತ್ ಶೈವ ಧರ್ಮದ ಒಂದು ಶಾಖೆ–ದ್ವೈತ, ವಿಶಿಷ್ಟಾದ್ವೈತ ಪಂಥಗಳಿದ್ದಂತೆ" ಎಂದು ಅವರು ಘೋಷಿಸಿದ್ದಾರೆ. ಹಾಗೆಯೇ ವೀರಶೈವ, ಲಿಂಗಾಯತ ಎಂಬವು ವೃಕ್ಷ, ಮರಗಳಂತೆ ವಿಭಿನ್ನ ಭಿನ್ನ ಪದಗಳಾದರು ಅವರು ಸೂಚಿಸುವ ಪರಿಕಲ್ಪನೆ ಒಂದೇ. ಅವರು ಪರಂಪರೆಯಂತೆಯೇ ಆಧುನಿಕ ಜಗತ್ತಿನ ಆಗು ಹೋಗುಗಳನ್ನು ಗ್ರಹಿಸಿ ಸೂಕ್ಷ್ಮವಾಗಿ ಸ್ಪಂದಿಸುತ್ತಾರೆ. ಅವರಲ್ಲಿ ಕೀರ್ತಿ, ಮೋಹ, ಅಸಹನೆ, ಸ್ವಪ್ರತಿಷ್ಠೆ, ಸ್ವಾರ್ಥ ಇವುಗಳಿಗೆ

ಅವಕಾಶವೇ ಇಲ್ಲ. ವೀರಶೈವ ಅಥವಾ ಲಿಂಗಾಯತ ಸಮಾಜದಂತೆಯೇ ಭಾರತೀಯ ಸಮಾಜವು, ಮಾನವ ಸಮಾಜವೂ ಅಷ್ಟೆ ಅವರಿಗೆ ಮುಖ್ಯ". ಅವರ ಒಂದೊಂದು ನುಡಿಗಳೂ ಪೂಜ್ಯರ ಶಿವ ವ್ಯಕ್ತಿತ್ವಕ್ಕೆ ಭಾಷ್ಯಬರೆದಂತಿದೆ.

ಡಾ. ಎಂ. ಚಿದಾನಂದಮೂರ್ತಿಯವರು ಭೌತಿಕವಾಗಿ ಇಂದು ನಮ್ಮ ಮುಂದೆ ಇಲ್ಲದೇ ಹೋದರೂ ಅವರು ಬಿಟ್ಟುಹೋದ ಆದರ್ಶ ಮೌಲ್ಯಗಳು, ಮೌಲಿಕ ಗ್ರಂಥಗಳು, ನಾಡು-ನುಡಿ, ಸಂಸ್ಕೃತಿಯ ಅಭಿಮಾನ ನಮಗೆ ಸದಾ ಸ್ಫೂರ್ತಿಯಾಗಿದೆ. □

## ಶ್ರದ್ಧಾಂಜಲಿ



### ಡಾ. ಈಶ್ವರ ಮಂಟೂರ

ಬಸವಚೇತನ, ಅನಾಥ ಮಕ್ಕಳಿಗೆ ಗುರುಕುಲ ಪ್ರಾರಂಭಿಸಿ ಆ ಮಕ್ಕಳಿಗೆ ಶಿಕ್ಷಣ, ವಸತಿ ಅನ್ನನೀಡಿದ ಕರುಣಾಮಯಿಯಾಗಿ, ಬಸವ ಧರ್ಮದ ಪ್ರಚಾರಕರಾಗಿ, ಪ್ರವಚನಕಾರರಾಗಿ ನಾಡಿನ ಮೂಲೆ ಮೂಲೆಗೂ ಹೋಗಿ ವಚನಗಳ ಸಾರ ತಿಳಿಸಿದ ಬಸವ ಸಂಜಾತರು ಡಾ. ಈಶ್ವರ ಮಂಟೂರ ಅವರು ದಿನಾಂಕ:೯.೧೨.೨೦೨೧ರಂದು ಲಿಂಗೈಕ್ಯರಾದ ರೆಂದು ತಿಳಿಸಲು ವಿಷಾದವೆನಿಸುತ್ತದೆ.

ಡಾ॥ ಈಶ್ವರ ಮಂಟೂರ ಅವರು ಕ್ರಿ.ಶ ೨೦೦೩-೨೦೦೪ರಲ್ಲಿ ಅನುಭಾವ ಸಂಗಮದವರಿಂದ ಸುಕ್ಷೇತ್ರ ಹುನ್ನೂರು ಗ್ರಾಮದ ಹರಜನ ಕೇರಿಯ ಅಂಬೇಡ್ಕರ ಭವನದಲ್ಲಿ ಆಯೋಜಿಸಿದ ದಿನನಿತ್ಯದ ಅನುಭಾವ ಗೋಷ್ಠಿಗೆ ಹಾಜರಾಗುವುದರೊಂದಿಗೆ ನೈತಿಕ ಬಲವನ್ನು ನೀಡಿದ್ದಾರೆ. ಅದೇ ಸಾಲಿನಲ್ಲಿ ಸುಕ್ಷೇತ್ರ ಜಮಖಂಡಿಯಲ್ಲಿ ಆಯೋಜಿಸಿದ ಹರಜನ ಮಹಿಳೆ ಮತ್ತು ಮಕ್ಕಳಿಗೆ ಕರಲಿಂಗದೀಕ್ಷೆಯನ್ನು ಸುಕ್ಷೇತ್ರ ಚಿತ್ರದುರ್ಗದ ಬೃಹನ್ಮಠದ ಪರಮಪೂಜ್ಯ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಮಹಾಶರಣರಿಂದ ಸಂಪನ್ನಗೊಳಿಸಿದ ಈಶ್ವರ ಮಂಟೂರ ಅವರಿಗೆ ನಾವು ಋಣಿಯಾಗಿದ್ದೇವೆ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು 'ಶಕುಂತಲ ಜಯದೇವ ಶರಣ ಪ್ರಶಸ್ತಿ' ೨೦೨೦ರಲ್ಲಿ ನೀಡಿ ಗೌರವಿಸಿದೆ.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಗೌರವಾಧ್ಯಕ್ಷರುಗಳು ಹಾಗೂ ಪದಾಧಿಕಾರಿಗಳು, ಲಿಂ. ಡಾ. ಈಶ್ವರ ಮಂಟೂರ ಅವರ ನಿಧನಕ್ಕೆ ಸಂತಾಪ ಸೂಚಿಸಿ ಕುಟುಂಬ ವರ್ಗಕ್ಕೆ ಅವರ ಅಗಲಿಕೆಯ ದುಃಖವನ್ನು ಸಹಿಸಿಕೊಳ್ಳುವ ಶಕ್ತಿಯನ್ನು ಭಗವಂತನು ದಯಪಾಲಿಸಲೆಂದು ಪ್ರಾರ್ಥಿಸಲಾಗಿದೆ.





# ಸಿದ್ಧರಾಮ ಶರಣರ ವಿಭಿನ್ನ ನಿಲುವುಗಳು

**ವೆಂಕಟೇಶ ಕೆ. ಜನಾದ್ರಿ**

**ಯೋ**ಗ ಎನ್ನುವುದೇ ಒಂದು ಅನುಭಾವಿಕ ಸಾಧನೆ. ಅದು ಕರ್ಮ, ಕಾಯಕ, ಅರಿವು, ಶಿವಾನುಭವ... ಹೀಗೆ ಯಾವುದೇ ಇರಲಿ ಅದೊಂದು ಬಗೆಯಲ್ಲಿ ಒಳಗಣ ಅರಿವನ್ನು ಕಂಡುಕೊಂಡ ಬಯಲ ಸತ್ಯವಾಗಿರುತ್ತದೆ. ಸಾಮಾನ್ಯವಾಗಿ ಪ್ರತಿಯೊಬ್ಬರೂ ಯಾವುದಾದರೊಂದು ಕೆಲಸದಲ್ಲಿ ಅಂದರೆ ಕರ್ಮದಲ್ಲಿ ತೊಡಗಿಕೊಂಡಿರುತ್ತಾರೆ. ಆ ಕರ್ಮದ ಮೂಲಕ ತಮ್ಮ ತಮ್ಮ ಬದುಕಿನ ಸಾರ್ಥಕತೆಯನ್ನು ಪಡೆಯುತ್ತಾರೆ. ಈ ಕರ್ಮಕ್ಕೆ ಒಂದೊಂದು ನೆಲೆಯಲ್ಲಿ ಒಂದೊಂದು ಬಗೆಯಲ್ಲಿ ಕರೆಯುವ ವಾಡಿಕೆ ಇದೆ. ಬಸವ ಪ್ರಣೀತ ಶರಣರ ವಚನ ಪರಿಕಲ್ಪನೆಯಲ್ಲಿಯಂತೂ "ಕಾಯಕ' ಎಂದು ಬಹಳ ಉನ್ನತ ಮಟ್ಟಕ್ಕೆ ಶರಣರು/ಸಾಧಕರು ಮಾಡುವ ಕಾರ್ಯವನ್ನು ಪರಿಗಣಿಸುತ್ತಾರೆ. ಈ ಬಗೆಯ ಕಾಯಕದಿಂದಲೇ ಅವರು ಕೈಲಾಸವನ್ನು ಕಾಣುವ ಯೋಗವನ್ನು ಕಂಡುಕೊಳ್ಳಬಹುದೆನ್ನುತ್ತಾರೆ.

ಈ ಬಗೆಯಲ್ಲಿ ಅನೇಕ ಶರಣರು ಬಸವಣ್ಣನೊಡನೆ ಚರ್ಚಿಸುತ್ತ, ವಚನಗಳ ರಚನೆ ಮಾಡುತ್ತಲೇ ತಮ್ಮ ಕರ್ಮದೊಡನೆಯೇ ಅರಿವನ್ನು ಪಡೆಯುವ ಮೂಲಕ ಕರ್ಮಯೋಗಿಗಳಾಗಿ ತಮ್ಮೊಳಗಿನ ಅರಿವನ್ನು ಜಾಗೃತಗೊಳಿಸಿಕೊಳ್ಳುವಲ್ಲಿ ಶಿವಯೋಗ ಮಾಡುತ್ತ, ಇಷ್ಟಲಿಂಗವನ್ನು ಪೂಜಿಸಿಕೊಳ್ಳುತ್ತ ಶಿವಯೋಗಿಯಾಗಿರುವ ಅನೇಕ ಶರಣರ, ಭಕ್ತರ ಪ್ರಕರಣಗಳನ್ನೂ ತಿಳಿಯಬಹುದು. ಅಂಥ ಸಾಧಕ ಶರಣರಲ್ಲಿ ಒಂದಾವರ್ತಿ ಬಸವಣ್ಣನ ಶೂನ್ಯ ಪೀಠದ ಅಧಿಪತಿಯೂ ಆಗಿದ್ದ ಸಿದ್ಧರಾಮ ಶರಣರೂ ಒಬ್ಬರು. ಸಿದ್ಧರಾಮೇಶ್ವರರೆಂದೂ ಮತ್ತು ಶಿವಯೋಗಿ ಸಿದ್ಧರಾಮ ಎಂದು ಇವರನ್ನು ಕರೆಯುವ ವಾಡಿಕೆ ಇದೆ. ಕೇವಲ ಸ್ಥಾವರಗಳ ಕಾಯಕ ಮಾಡುತ್ತಿದ್ದ ಇವರು ಅನೇಕ ಶರಣರ ಸಂಪರ್ಕಕ್ಕೆ ಬಂದು ತಮ್ಮ ಬದುಕನ್ನೇ ಜಂಗಮವನ್ನಾಗಿಸಿಕೊಂಡ ವಿಶಿಷ್ಟ ಶರಣರಾದವರು.

ಹನ್ನೆರಡನೇ ಶತಮಾನದ ಅನೇಕ ಶರಣರಲ್ಲಿ ಇವರ ಹೆಸರು, ಸಾಧನೆ, ಅನುಭಾವಿಕ ನೆಲೆಯಲ್ಲಿ ಪರಿವರ್ತನೆಯಾದ ಬಗೆಯನ್ನು ತಿಳಿದುಕೊಂಡಾಗ ಇವರ ಜೀವನವೇ

*ಲೆಕ್ಕಪತ್ರ ಅಧೀಕ್ಷಕ, ಕಕರಸಾ.ಸಂಸ್ಥೆ , ಕಲಬುರ್ಗಿ ವಿಭಾಗ-2, ಕಲಬುರ್ಗಿ-585102*
*ಮೊ: 9945330492*

ರೋಚಕತೆಯಿಂದ ಕೂಡಿದ್ದು ಬಹಳ ವಿಶಿಷ್ಟವಾಗಿದ್ದೆನಿಸುತ್ತದೆ. ಪೌರಾಣಿಕ ಕತೆ, ಜನಪದರಲ್ಲಿ, ವಚನ ಸಾಹಿತ್ಯದಲ್ಲಿ, ವಚನಕಾರರ ಇತಿಹಾಸದಲ್ಲಿ ಮತ್ತು ಹಲವು ಕೃತಿಗಳಲ್ಲಿಯೂ ಸಿದ್ದರಾಮರು ಮೂಲತಃ ಕರ್ಮವನ್ನೇ ನೆಚ್ಚಿಕೊಂಡು ಹಲವಾರು ಕರೆ ಭಾವಿಗಳನ್ನು, ಗುಡಿ ಮಠಗಳನ್ನು ಕಟ್ಟಿಸುವ ಕಟ್ಟುವ ಒಡ್ಡರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದವರು. ಇಂದಿನ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರಕ್ಕೆ ಅಂದು ಸೊನ್ನಲಿಗೆ ಎಂದು ಕರೆಯುತ್ತಿದ್ದರು. ಅಲ್ಲಿ ಮುದ್ದಯ್ಯ ಮತ್ತು ಸುಗ್ಗವ್ವೆ ಎಂಬ ಕಾಯಕ ಜೀವಿಗಳ ಮಗನಾಗಿ ಕ್ರಿ.ಶ. ೧೧೬೦ ರ ಅವಧಿಯಲ್ಲಿ ಜನ್ಮ ತಳೆಯುತ್ತಾರೆಂಬ ಒಂದು ಅಂದಾಜಿನ ಮಾಹಿತಿ ಇದೆ. ಈತನ ಮೂಲ ಕಾರ್ಯವಾದ ಕೆರೆ, ಭಾವಿ, ಗುಡಿ, ಮಠಗಳನ್ನು ಕಟ್ಟುವುದು, ಕಟ್ಟಿಸುವುದರಲ್ಲಿಯೇ ತೊಡಗಿಕೊಂಡಿದ್ದ ಕಾರಣ ಈ ಕಾರ್ಯವನ್ನು ಕರ್ಮಯೋಗಿಯಂತೆ ಅರ್ಪಣಾಭಾವದಿಂದ ಮಾಡುತ್ತಿದ್ದ. ತಾನಿಡಿದ ಕೆಲಸ ಸಮರ್ಥವಾಗಿ ಪೂರ್ಣಗೊಳಿಸುವಲ್ಲಿ ಅವಶ್ಯವಿದ್ದ ಕಾರ್ಮಿಕರನ್ನು ಸಂಘಟಿಸುವಲ್ಲಿ ಒಳ್ಳೆಯ ಸಂಘಟಕ, ಲೋಕೋಪಯೋಗಿ ಕೆಲಸಗಳ ನಿರ್ವಹಣೆಯಲ್ಲಿ ನಿಸ್ಸೀಮ. ಜೊತೆಗೆ ಒಬ್ಬ ಒಳ್ಳೆಯ ಅಂತಃಕರುಣಿ, ಕುಡಿಯುವ ನೀರಿಗಾಗಿ ಮನುಷ್ಯರಿಗೆ ಮಾತ್ರ ಕೆರೆ, ಬಾವಿಗಳನ್ನು ಕಟ್ಟಿಸಲಿಲ್ಲ. ಪಶು ಪಕ್ಷಿಗಳಿಗೂ ಕುಡಿಯಲು ನೀರು ಬೇಕಾಗುತ್ತದೆ ಎಂದು ಅಂದಿನ ಕಾಲದಲ್ಲಿ ಸೂಕ್ತ ವ್ಯವಸ್ಥೆಯನ್ನು ಕಲ್ಪಿಸಿದ್ದನ್ನು ನೋಡಿದಾಗ ಈತನಲ್ಲಿ ಮಾನವೀಯತೆಗಿಂತ ಮಿಗಿಲಾಗಿ 'ಸಕಲ ಜೀವಾತ್ಮರಿಗೂ ಲೇಸಾಗಲಿ' ಎಂಬ ತತ್ವಕ್ಕೆ ಕಟಿಬದ್ಧವಾಗಿರುವುದನ್ನು ಗಮನಿಸಬಹುದು.

ಮೊದ ಮೊದಲು ತನ್ನ ಕಾರ್ಯವನ್ನು ಕೇವಲ ತನ್ನ ಕರ್ಮವೆಂದೇ ಮಾಡುತ್ತಿದ್ದ ಸಿದ್ದರಾಮ ಅದೇ ಕರ್ಮವನ್ನು ಒಬ್ಬ ಯೋಗಿಯಂತೆ ಮಾಡುತ್ತಿದ್ದ ಕಾರಣ ಕರ್ಮಯೋಗಿ ಎಂದು ಅಂದಿನವರು ಕರೆಯುತ್ತಿದ್ದರು ನಂತರ ಈತ ಅಲ್ಲಮ ಪ್ರಭು, ಚೆನ್ನಬಸವಣ್ಣ, ಬಸವಣ್ಣ ಮತ್ತಿತರ ಶರಣರ ಸಂಪರ್ಕಕ್ಕೆ ಬಂದು ಅನುಭವ ಮಂಟಪದಲ್ಲಿ ಪ್ರವೇಶ ಪಡೆದು ಒಬ್ಬ ಪ್ರಮುಖ ಅನುಭಾವಿಯಾಗಿ ಶೂನ್ಯ ಪೀಠದ ಅಧ್ಯಕ್ಷನಾಗಿಯೂ ಕಾಯಕ ಮಾಡುವಂಥ ಸಂದರ್ಭ ಒದಗಿ ಬಂದಿದ್ದು ಅಷ್ಟೇ ಅಲ್ಲ ಇಷ್ಟಲಿಂಗ ಪೂಜಿಸಿಕೊಳ್ಳುವಲ್ಲಿ ಒಬ್ಬ ಯೋಗಿಯಾಗಿ ಸಾಧಿಸುತ್ತ ಮೂಲತಃ ಕರ್ಮಯೋಗಿಯಾಗಿದ್ದ ತನ್ನ ಸಾಧನೆಯಿಂದ ತಾನೇ ಶಿವಯೋಗಿಯಾಗುವಷ್ಟು ಅನುಭಾವಿಕ ನೆಲೆಯಲ್ಲಿ ಬೆರಗಾಗುವಷ್ಟು ಪರಿವರ್ತನೆ ಯಾಗುತ್ತಾನೆ. ಇದಕ್ಕೆ ಕಾರಣ ಪರವೆಲ್ಲವೂ ತನ್ನೊಳಗೇ ಇದೆಯೆಂಬ ಸತ್ಯ ಅರಿತುಕೊಂಡು ಎನ್ನಲ್ಲಿ ಎಲ್ಲವೂ ಉಂಟು ಎಂದು ಹಲವಾರು ವಚನಕಾರರೊಡನೆ ಚರ್ಚಿಸಿ, ವಿಷಯಗಳನ್ನು ಮಂಥಿಸಿ, ಹೊಸ ಹೊಸ ವಿಚಾರಗಳು ತನ್ನದೇ ಅನುಭಾವದೊಂದಿಗೆ ಆವಿರ್ಭವಿಸಿ ಕೊಂಡಿದ್ದರ ಫಲವಾಗಿ ಸ್ವತಃ ಹಲವಾರು ವಚನಗಳನ್ನು ರಚಿಸಿದ್ದಾರೆ. ಆದರೆ ಕಲ್ಯಾಣ ಕ್ರಾಂತಿಯ ಪರಿಣಾಮವಾಗಿ ಅವುಗಳಲ್ಲಿ ಕೇವಲ ೧೯೯೨ ವಚನಗಳನ್ನು ಅಭ್ಯಸಿಸಲು ನಮಗಿಂದು ಲಭ್ಯ. ಈ ಎಲ್ಲಾ ವಚನಗಳ ವಚನಾಂಕಿತವೂ "ಕಪಿಲಸಿದ್ಧ ಮಲ್ಲಿಕಾರ್ಜುನ"





"ಕಪಿಲಸಿದ್ಧ ಮಲ್ಲಿನಾಥ" ಎಂದು ಅನಾವರಣವಾಗಿರುತ್ತವೆ. ಈ ವಚನಗಳಲ್ಲಿ ವೈಚಾರಿಕತೆ ಇದೆ, ಬೆಡಗು ಮತ್ತು ಬೆರಗು ಇರುವ ಇಲ್ಲಿಯ ವಿಚಾರಗಳನ್ನು ಮತ್ತೇ ಮತ್ತೇ ಅಧ್ಯಯನಕ್ಕೊಳಪಡಿಸಿದಾಗ ಪ್ರತಿ ಸಲವು ವಿಭಿನ್ನವಾಗಿ ತೆರೆದುಕೊಳ್ಳುವ ಸಾಮರ್ಥ್ಯವನ್ನೊಳಗೊಂಡಿವೆ.

"ಭಕ್ತನ ಮನ ಹೆಣ್ಣಿನೊಳಗಾದಡೆ ವಿವಾಹವಾಗಿ ಕೂಡುವುದು, ಭಕ್ತನ ಮನ ಮಣ್ಣಿನೊಳಗಾದಡೆ ಕೊಂಡು ಆಲಯವ ಮಾಡುವುದು, ಭಕ್ತನ ಮನ ಹೊನ್ನಿನೊಳಗಾದಡೆ ಬಳಲಿ ದೊರಕಿಸುವುದು ನೋಡಯ್ಯ ಕಪಿಲಸಿದ್ದ ಮಲ್ಲಿಕಾರ್ಜುನ" ಎಂಬ ಇವರ ವಚನದ ವಿಚಾರದಲ್ಲಿ ಭಕ್ತನ ಮನವೇ ಎಲ್ಲದಕ್ಕೂ ಮೂಲವಾಗಿದೆ. ಭಕ್ತ ಶರಣನಾಗಲು, ಶರಣನಿಂದ ಜಂಗಮವಾಗಲು ಮೂಲ ಅವರವರ ಮನಸ್ಸು ಮತ್ತದರ ಬದ್ದತೆ. ಆ ಮನಸ್ಸು ಭಕ್ತನೊಳಗಣ ಅರಿವಿನೊಡನೆ ಅಂದರೆ ಮಹಾದೇವನೊಡನೆ ಬೆರೆತಾಗ ಆ ದೇವನೇ ತಾನಾಗುವ ಪರಿಯನ್ನು ಗಮನಿಸಬಹುದು. ಇದನ್ನೇ ಮೇಲಿನ ವಚನದಲ್ಲಿ ಒಂದು ಉದಾಹರಣೆಯ ಮೂಲಕ ಹೇಳುತ್ತಾರೆ. ಭಕ್ತನ ಮನಸ್ಸು ಒಂದು ಹೆಣ್ಣಿನೊಳಗೆ ಒಂದಾಗಿ ಪರಸ್ಪರ ಮನಗಳು ಕೂಡಿದರೆ ಆಕೆಯೊಡನೆ ವಿವಾಹವಾಗುವುದು. ಭಕ್ತನ ಮನ ಮಣ್ಣಿಗಾಗಿ ಬಯಸಿದಲ್ಲಿ ಆ ನೆಲವನ್ನು ಕೊಂಡುಕೊಂಡು ಅಲ್ಲಿ ಆಲಯ ಮಾಡುವುದು. ಭಕ್ತನ ಮನ ಹೊನ್ನನ್ನು ಬಯಸಿದಲ್ಲಿ ಅದಕ್ಕಾಗಿ ಪ್ರಯತ್ನಿಸಿ ದೊರಕಿಸಿಕೊಳ್ಳುವವರೆಗೆ ಪ್ರಯತ್ನಿಸುವ ಸಹಜ ಮನೋಧರ್ಮವನ್ನು ಹೇಳುತ್ತಾ ಹೋಗುತ್ತಾರೆ. ಈ ವಚನದ ವಿಶಿಷ್ಟತೆ ಎಂದರೆ ಒಂದೆರಡು ಉದಾಹರಣೆಯೊಂದಿಗೆ ಭಕ್ತನ ಮನ ಎಲ್ಲೋ ಒಂದೆಡೆ ನೆಲೆಗೊಳಿಸಿ ಅಲ್ಲಿಗೆ ವಿಚಾರವನ್ನು ನಿಲ್ಲಿಸಿಬಿಡುತ್ತಾರೆ. ಆದರೆ ವಚನದ ಆಶಯ ಇನ್ನೂ ಇದೆ. ಭಕ್ತನಾದಾತ ತನ್ನ ಮನವನ್ನು ಕಪಿಲಸಿದ್ದಮಲ್ಲಿಕಾರ್ಜುನನೆಂಬ ದೇವನೊಡನೊಳಗೊಂಡು ತಾನೇ ಆ ದೇವನಾಗಬೇಕೆಂಬುದನ್ನು ಸೂಚ್ಯವಾಗಿ ತನ್ನ ಆರಾಧ್ಯ ದೈವವನ್ನು ನೆನೆಯುವದರೊಂದಿಗೆ ಗೌಪ್ಯವಾಗಿ ತಿಳಿಸುತ್ತಾರೆ. ಎನ್ನಲ್ಲಿ ಏನುಂಟೆಂದು? ತನ್ನಷ್ಟಕ್ಕೆ ಪ್ರಶ್ನಿಸಿಕೊಂಡು ಅದಕ್ಕೆ ಗೌಪ್ಯವಾಗಿ ಉತ್ತರ ಹುಡುಕಿಕೊಂಡು ತಾನೇ ಲಿಂಗವಾಗಿ ಮಹಾಲಿಂಗದಲ್ಲಿ ಒಂದಾಗುವ ಪರಿಯನ್ನು ತಾವೇ ಅರಿಯುತ್ತಾರೆ. ಹೀಗಾಗಿ ಇದು ಶಿವಯೋಗಿ ಸಿದ್ದರಾಮನ ಗೌಪ್ಯವಿಚಾರದ ವಚನವಾಗಿದೆ.

ಮೊದಲಿಗೆ ಸಿದ್ದರಾಮ ಕೇವಲ ಕೆರೆ ಭಾವಿಗಳನ್ನು ಕಟ್ಟಿಸುತ್ತ ಕರ್ಮವನ್ನೇ ಮೈಗೂಡಿಸಿಕೊಂಡವನಾಗಿದ್ದ ಎಂಬ ವಿಚಾರ ಆರಂಭದಲ್ಲಿ ಬರುತ್ತದೆ. ಆದರೆ ಅಲ್ಲಮ ಮತ್ತು ಚೆನ್ನಬಸವಣ್ಣ, ಬಸವಣ್ಣನವರ ಸಂಪರ್ಕಕ್ಕೆ ಬಂದಾದ ಮೇಲೆ "ಕರೆಯಲ್ಲಿ ತೀರ್ಥ, ಮನದಲ್ಲಿ ಸರ್ವಜೀವದಯಾಪರತ್ವ ಮೈದೆಗೆದೊಡೆ ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ" ಎಂಬುದು ಆತನ ನಿಲುವಾಗುತ್ತದೆ. ತಾನು ಕಟ್ಟಿಸಿದ ಕೆರೆಯಲ್ಲಿ ಕೇವಲ ನೀರು ಮಾತ್ರವಲ್ಲ ಅಲ್ಲಿ ಸತ್ಯ ನಿಷ್ಠವಾದ ಕಾಯಕವಿರುವ ಕಾರಣ ಅದುವೇ ತೀರ್ಥವಾಗಿದೆ. ತನ್ನ

ಮನಸ್ಸು ಶುದ್ದವಿರುವ ಕಾರಣ ಸಕಲ ಜೀವಕ್ಕೆ ದಯೆ ಇರುವ ಜಂಗಮವಾಗಿ ಆ ಇಡೀ ಕೆರೆ ಸತ್ಪಾತ್ರಕ್ಕೆ ಸಲ್ಲಿಕೆಯಾಗುತ್ತದೆ. ಈ ವಿಚಾರವನ್ನು ಕೇವಲ ಮಾತಿನಲ್ಲಿ ಹೇಳದೇ ಇದಕ್ಕೆ ಶರಣರ ಪಾದ ಸಾಕ್ಷಿ ಅಷ್ಟೇ ಅಲ್ಲ ತನ್ನ ಮನ ಸಾಕ್ಷಿ ಎಂದು ಸಾಕ್ಷೀಕರಿಸುತ್ತಾನೆ.

ತನ್ನ ಸೇವೆ ಲೋಕೋಪಯೋಗಿ ಸೇವೆ ಎಂದೆನಿಸಿದರೂ ಅದೂ ಲೋಕಕ್ಕೆಲ್ಲ ಸತ್ಪಾತ್ರಕ್ಕೆ ಸಲ್ಲಿಕೆಯಾಗುವಂಥದ್ದೆಂದು ಹೆಮ್ಮೆ ಪಡುತ್ತಾನೆ. ಇದು ಒಬ್ಬ ಕರ್ಮಯೋಗಿಯಾಗಿ ತನ್ನ ಕಾಯಕವನ್ನು ನಿಷ್ಠೆಯಿಂದ ಮಾಡಿದ ಸಾಧನೆಯ ಕಾರಣ, ಅದರ ಫಲ ಸತ್ಪಾತ್ರಕ್ಕೆ ಸಲ್ಲಿಕೆಯಾಗುವ ಮೂಲಕ ತಾನೇ ಜಂಗಮವಾಗಿ ತಾನೇ ಶಿವಯೋಗಿಯಾಗುವ ಪರಿಯನ್ನು ಬಿಂಬಿಸುತ್ತದೆ. ಹೀಗೆ ಬದಲಾಗುವುದಕ್ಕೆ ಆತನೊಡನೆ ಸಂವಾದಿಸಿದ ಅನೇಕ ಶರಣರು ಮತ್ತು ಅನುಭವ ಮಂಟಪದಲ್ಲಿ ಚಿಂತನ ಮಂಥನವಾಗುವ ವಿಚಾರಗಳು ಮುಖ್ಯವಾಗಿವೆ. ಹೀಗೆ ಸಿದ್ದರಾಮ ಶರಣರು ಒಬ್ಬ ಕರ್ಮಯೋಗಿಯಾಗಿ, ಒಬ್ಬ ಶಿವಯೋಗಿಯಾಗಿ ಹಲವಾರು ವಚನಗಳನ್ನು ರಚಿಸುವ ಮೂಲಕ ಒಬ್ಬ ವಚನಯೋಗಿಯೂ ಆಗಿರುವ ಪರಿಯನ್ನು ಇದಕ್ಕಾಗಿ ಆತ ಮಾಡಿಕೊಳ್ಳುತ್ತಿರುವ ಸಿದ್ದತೆಯನ್ನು ಇಡೀ ಶರಣ ಸಂಕುಲ ಬೆರಗಿನಿಂದ ಕಾಣುತ್ತಾರೆ.

ಸಿದ್ದರಾಮನ ಕುರಿತು ಜನಪದದಲ್ಲಿ ಮತ್ತು ಹಲವಾರು ಕೃತಿಗಳಲ್ಲಿ ಹಲವಾರು ಕಥನಗಳು, ಪೌರಾಣಿಕ ಸಂಗತಿಗಳು ಆತನ ಇಡೀ ವ್ಯಕ್ತಿತ್ವನ್ನು ಅನಾವರಣಗೊಳಿಸುತ್ತವೆ. ಅವೆಲ್ಲವೂ ಜನಜನಿತವಾಗಿರುವ ಕಾರಣ ನಾನಿಲ್ಲಿ ಪ್ರಸ್ತಾಪಿಸಲು ಪ್ರಯತ್ನಿಸಿಲ್ಲ. ವಿಶೇಷವಾಗಿ ಸೊಲ್ಲಾಪುರದಿಂದ ಅಲ್ಲಮರು ಸಿದ್ದರಾಮನನ್ನು ಕರೆದುಕೊಂಡು ಬಸವಕಲ್ಯಾಣಕ್ಕೆ ಬಂದು ಅನುಭವ ಮಂಟಪದಲ್ಲಿ ಪ್ರವೇಶ ಪಡೆಯುವ ಸಂದರ್ಭದಲ್ಲಿ ಬಸವಣ್ಣನೊಡನೆ, ಚೆನ್ನಬಸವಣ್ಣನೊಡನೆ ಹಲವಾರು ಶರಣರೊಡನೆ ಇಷ್ಟಲಿಂಗದ ಕುರಿತು ಸಂವಾದಿಸುವದನ್ನು ಮತ್ತು ಇಷ್ಟಲಿಂಗದ ಅವಶ್ಯಕತೆ ಕುರಿತು ಬಹಳ ವಿಭಿನ್ನವಾಗಿ ಚರ್ಚೆಗಳು ಅನುಭಾವಿಕ ನೆಲೆಯಲ್ಲಿ ಅನಾವರಣಗೊಳ್ಳುವ ಪರಿ ಬಹಳ ಮಹತ್ವವನ್ನು ಹೊಂದಿದೆ. ಚೆನ್ನಬಸವಣ್ಣ ಶಿವಯೋಗ ಸಾಧನೆಗೆ ನಿರಾಕಾರ ದೇವನನ್ನು ಅರಿಯಲು ಸಾಕಾರದ ಇಷ್ಟಲಿಂಗದ ಅವಶ್ಯಕತೆ ಇದ್ದೇ ಇದೆ ಎಂದಾಗ, ಒಲುಮೆಯ ಕೂಟಕ್ಕೆ ಹಾಸಿಗೆಯ ಹಂಗೇಕೆ ಎಂಬ ಅಲ್ಲಮನ ನಿಲುವಿಗಂಟಿಕೊಂಡ ಸಿದ್ದರಾಮ ನನ್ನ ಅಂಗವೇ ಲಿಂಗವನ್ನಾಗಿಸಿಕೊಂಡಿರುವಾಗ ಮತ್ತೊಂದು ಲಿಂಗದ ಅವಶ್ಯಕತೆ ಇದೆಯೇ? ಎನ್ನೊಳಗೇ ಆತನಿದ್ದಾನೆ ಎಂಬ ಅದ್ಭುತವಾದ ವಿಚಾರವನ್ನು ಪ್ರಶ್ನಿಸುತ್ತಾನೆ.

ಆಗ ಚೆನ್ನ ಬಸವಣ್ಣ ನೀನೇ ಲಿಂಗವಾಗಿರುವೆ ಎಂದು ನಿನ್ನ ಅನುಭವಕ್ಕೆ ಬಂದಿದೆ ಎಂದರೆ ನೀನಿನ್ನೂ ಲಿಂಗವಾಗಿಲ್ಲವೆಂದೇ ಅರ್ಥ. ಏಕೆಂದರೆ ಲಿಂಗವಾದರೆ ದೇವನಾದಂತೆ ದೇವನಾಗಿದ್ದರೆ ಅದು ಅನುಭವಕ್ಕೆ ಬಾರದ ವಿಚಾರ, ಅದು ಅಗೋಚರ, ಅಗಮ್ಯ, ಹಾಗಾಗಿ ನೀನು ಲಿಂಗಗುಣ ಹೊಂದಿರುವ ವಿಷಯವು ನಿನ್ನ ಅನುಭವಕ್ಕೆ ಬಂದಿದೆಯೆಂದರೆ





ನಿನ್ನಲ್ಲಿನ್ನೂ ಅಂಗ ಗುಣಗಳಿವೆ ಎಂದರ್ಥ. ಅಂಥ ಅಂಗ ಗುಣಗಳು ಅನುಭವಕ್ಕೆ ಬರುತ್ತಿರುವ ವರೆಗೂ ಇಷ್ಟಲಿಂಗದ ಅವಶ್ಯಕತೆ ಇದ್ದೇ ಇದೆ. ಅದಕ್ಕಾಗಿ ಶಿವಲಿಂಗವನ್ನು ಮನದಲ್ಲಿ ಅರಿಯಲು ಅಂಗದಲ್ಲಿ ಇಷ್ಟಲಿಂಗ ಬೇಕೆ ಬೇಕಾಗುತ್ತದೆ ಎನ್ನುತ್ತಾರೆ. ಬಯಲು ರೂಪಗೊಳಿಸುವ ಮೂಲಕ ಸಾಕಾರವಾದ ಇಷ್ಟಲಿಂಗವನ್ನಿಡಿದೇ ಅದೇ ಬಯಲಲ್ಲಿರುವ ನಿರಾಕಾರವನ್ನರಸಲು ಪ್ರಯತ್ನಿಸಬೇಕಾಗುತ್ತದೆ ಎಂದೂ ಚೆನ್ನಬಸವಣ್ಣ ವಿಶ್ಲೇಷಿಸುತ್ತಾರೆ.

ಹೀಗೆ ಒಂದು ಹಂತದಲ್ಲಿ ಬಸವಣ್ಣ, ಚೆನ್ನಬಸವಣ್ಣ ಮತ್ತು ಅಲ್ಲಮರೂ ಸಹ ಆತನ ಪ್ರಶ್ನೆಗಳಿಗೆ ಸಮರ್ಥವಾಗಿ ಉತ್ತರಿಸಲು ಕಷ್ಟಪಡುತ್ತಾರೆ. ಹಲವಾರು ವಿಚಾರಗಳ ಚಿಂತನ ಮಂಥನಗಳ ಫಲವಾಗಿ ಸ್ವತಃ ಸಿದ್ದರಾಮನಿಗೂ ನಿರಾಕಾರವನ್ನರಿಯಲು ಸಾಕಾರದ ಅವಶ್ಯಕತೆ ಇದೆಯಂದರಿವಾಗುತ್ತದೆ. ಆಗ ಚೆನ್ನಬಸವಣ್ಣನಿಂದ ಇಷ್ಟಲಿಂಗವನ್ನು ಪಡೆಯುವಲ್ಲಿ ಬಹುದೊಡ್ಡ ಚಿಂತನ ಮಂಥನವಾಗಿ ಅಗೋಚರ, ಅಗಮ್ಯ, ಅಪ್ರತಿಮ ವಿಚಾರಗಳೂ ಅಲ್ಲಿ ಬಯಲಾಗುತ್ತವೆ. ಆಗ ಬದಲಾದ ಸಿದ್ದರಾಮ ಹೊರಗೆ ದೇವಾಲಯವನ್ನು ಕಟ್ಟುವಲ್ಲಿ ನಿಸ್ಸೀಮನಾದಂತೆ ತನ್ನ ಒಳಗೆ ದೇಹವನ್ನೇ ದೇಹಾಲಯವನ್ನಾಗಿಸಿಕೊಂಡು ಅಲ್ಲಿ ಹೇಗೆ ದೇವಾಲಯವನ್ನು ಕಟ್ಟಿಕೊಳ್ಳಬೇಕೆಂಬುದನ್ನು ಅರಿಯುತ್ತಾನೆ. ಹೀಗೆ ಇಷ್ಟಲಿಂಗದೊಡನೆ ಅನುಸಂಧಾನದಲ್ಲಿ ಕಪಿಲಸಿದ್ದಮಲ್ಲಿನಾಥನೊಡನೆ ಬೆರೆತು ಬೇರಾಗದ ನಿಲವನ್ನು ಸಿದ್ಧರಾಮ ಬಹುಬೇಗನೇ ಸಾಧಿಸುತ್ತಾನೆ. ಅಲ್ಲಿ ಆತನ ಆತ್ಮ ಮತ್ತು ದೇವನ ಪರಮಾತ್ಮನಲ್ಲಿ ಐಕ್ಯವಾಗುತ್ತಿತ್ತು. ಹೀಗಾಗುವುದೊಂದು ಅನನ್ಯ ಅನುಭೂತಿ.

ಹೀಗೆ ಅನುಭಾವಿಕತೆಯ ತುತ್ತ ತುದಿಯತ್ತ ಕೈಚಾಚಿದ್ದ ಸಿದ್ದರಾಮ ಹಲವಾರು ತ್ರಿಪದಿಗಳನ್ನು, ಬಸವ ಸ್ತೋತ್ರ ತ್ರಿಪದಿಗಳನ್ನು, ಅಷ್ಟೋತ್ತರ ತ್ರಿವಿಧ, ಮಿಶ್ರಸ್ತೋತ್ರ ತ್ರಿವಿಧಿಗಳನ್ನು ರಚಿಸಿ ವಿಚಾರದ ಸೆಲೆಯಾಗಿ ತಿಳಿವಿನ ನೆಲೆಯಲ್ಲಿ ಬದುಕನ್ನು ಜಂಗಮಗೊಳಿಸಿಕೊಂಡಿದ್ದರು. ಜೊತೆಗೆ ಹಲವಾರು ಸ್ಥಾವರಗಳನ್ನು ವಿವಿದೆಡೆ ಸ್ಥಾಪಿಸಿ ಲೋಕಕ್ಕೆ ಅರ್ಪಿಸಿದ್ದನ್ನು ಇಂದಿನ ಸೊಲ್ಲಾಪುರ ಮತ್ತು ಇತರೆಡೆ ಕಾಣಬಹುದಾಗಿದೆ. ಆ ಸ್ಥಾವರಗಳು ಸಿದ್ದರಾಮನ ಆಶಯದಂತೆ ಇಂದಿಗೂ ಕೇವಲ ಸ್ಥಾವರವಾಗಿ ನಿಲ್ಲದೇ ಅನೇಕ ಶರಣ ವಿಚಾರಗಳನ್ನು ಪರೋಕ್ಷವಾಗಿ ಜಂಗಮಗೊಳಿಸುತ್ತಲಿವೆ. ಆತ ಕಟ್ಟಿಸಿದ ಕರೆಯಲ್ಲಿಯ ನೀರನ್ನು ಕುಡಿದ ಪಕ್ಷಿಗಳು, ಪ್ರಾಣಿಗಳು ಅನೇಕ ಜೀವಿಗಳಲ್ಲಿಯ ದೇವನೆಂಬ ಲಿಂಗಯ್ಯ ಮೆಚ್ಚಿ ಹೌದಹುದೆಂದೆನ್ನುತ್ತಿರುವಾಗ ಸಿದ್ದರಾಮನಿಗೆ ಮತ್ತೇನು ಬೇಕು? ಹೀಗಾಗಿ ಚಿನ್ಮಯಿ ಸಿದ್ದರಾಮನಿಗೆ ಮಾನವ ವಿಕಾಸ, ವ್ಯಕ್ತಿತ್ವ ವಿಕಸನಗಳ ಮೂಲಕ ಬಹಿರಂಗೊಂದಿಗೆ ಅಂತರಂಗವೂ ಬೆಳಗುತ್ತಲಿವೆ.

ಸಿದ್ದರಾಮ ಈ ಬಗೆಯಲ್ಲಿ ಸಾಧಿಸಿದ್ದರೂ ಚೆನ್ನಬಸವಣ್ಣ, ಅಲ್ಲಮ ಮತ್ತು ಬಸವಣ್ಣರಾದಿಯಾಗಿ ಎಲ್ಲ ಶರಣರಿಗೂ ಬಹಳ ವಿಧೇಯರಾಗಿ ಅವರ ವಿಚಾರಗಳಿಗೆ ಮನಸೋಲುತ್ತಾರೆ. ಬಸವಣ್ಣನ ಕುರಿತಾಗಿಯಂತೂ ವಿನೀತರಾಗಿ ಒಂದು ವಚನ ರಚಿಸಿದ್ದಾರೆ. “ಕಾಲಿಲ್ಲದವಂಗೆ ಕಾಲು ಕೊಟ್ಟೆ ಬಸವಾ, ಕಣ್ಣಿಲ್ಲದವಂಗೆ ಕಣ್ಣು ಕೊಟ್ಟೆ ಬಸವಾ, ಎನ್ನ ಕಣ್ಣು

ಕಾಲಿಂಗೆ ನೀನೆಯಯ್ಯಾ ಬಸವಾ, ಕಪಿಲಸಿದ್ಧಮಲ್ಲಿನಾಥಯ್ಯ" ಎನ್ನುವಲ್ಲಿ ಶರಣ ಸಂಸ್ಕೃತಿಗೂ ಮೂಲವಾಗಿರುವ ಬಸವಣ್ಣನನ್ನು ಅರ್ಪಣಾ ಭಾವದಲ್ಲಿ ನೆನೆಯುತ್ತಾರೆ. ಕಾಲಿಲ್ಲದವರಿಗೆ ಕಾಲು, ಕಣ್ಣಿಲ್ಲದವರಿಗೆ ಕಣ್ಣು ಕೊಡುವುದು ಪ್ರಾಯೋಗಿಕವಾಗಿ ಆಗದಿರಬಹುದು. ಆದರೆ ಇಲ್ಲಿ ಕಾಲು ಕೊಡುವುದೆಂದರೆ ಅವರವರ ನುಡಿಗೆ ಬದ್ಧವಾಗಿ ನಡೆಯನ್ನು ಕಲಿಸಿಕೊಟ್ಟಂತೆ, ಅದೆಂಥ ನಡೆಯೆಂದರೆ ನುಡಿದೂ ಅದಕ್ಕೆ ಬದ್ಧರಾಗಿ ನಡೆಯದಿರುವಂಥವರಿಗೆ ನಡೆಯುವುದನ್ನು ಬಸವಣ್ಣ ಕಲಿಸಿರುತ್ತಾರೆನ್ನುವ ವಿಚಾರ. ಇಲ್ಲಿ ಕಣ್ಣಿಲ್ಲದವರೆಂದರೆ ಒಳಗಿನ ಅರಿವಿನ ಕಣ್ಣನ್ನು ಅರಿಯದವರಿಗೆ ಅರಿವಿನ ಕಣ್ಣನು ಕೊಟ್ಟಾತ ಬಸವಣ್ಣ ಎಂಬ ನಿಲುವಿಲ್ಲಿದೆ. ಅರಿವಿನ ಕಣ್ಣಿನ ಮೂಲಕ ಎಲ್ಲರೊಳಗೇ ದೇವನಿದ್ದಾನೆಂದು ತಿಳಿಸುವುದಷ್ಟೇ ಆತನನ್ನು ಅರಿಯುವ ಬಗೆಯನ್ನು ಸಹ ಕಲಿಸಿಕೊಟ್ಟಾತ ಬಸವಣ್ಣ ಎನ್ನುತ್ತಾ ತಮಗೂ ಈ ಬಗೆಯಲ್ಲಿ ಇಂಥಹ ಕಾಲು ಮತ್ತು ಕಣ್ಣನ್ನು ಕೊಟ್ಟಿರುವ ಬಸವಣ್ಣನೇ ಎಲ್ಲವೂ ನೀನೇ ಎನ್ನುತ್ತಾ ತಮ್ಮ ಆರಾಧ್ಯದೈವನ್ನು ಇದಕ್ಕೆ ಸಾಕ್ಷೀಕರಿಸುತ್ತಾರೆ. ಹೀಗೆ ಬಸವಣ್ಣ ನುಡಿಗೆ ಬದ್ಧವಾಗಿ ನಡೆಯುವ ಕಾಲನ್ನು ಮತ್ತು ತಮ್ಮ ತಮ್ಮ ಅರಿವಿನ ಮೂಲಕ ತಮ್ಮಲ್ಲಿಯೇ ಇರುವ ಒಳಗಣ್ಣನ್ನು ದಯಪಾಲಿಸುವ ಮೂಲಕ ಶರಣ ಸಂಕುಲವನ್ನೇ ಸೃಜಿಸುವಂಥ ಕಾಯಕ ಮಾಡಿರುವುದನ್ನು ಸಿದ್ಧರಾಮ ಹೀಗೆ ನೆನೆಯುತ್ತಾರೆ.

ಹೀಗಾಗಿ ಬಸವಣ್ಣನ ಅಂದಿನ ಕಲ್ಯಾಣದ ನಾಡಿನಲ್ಲಿ ಕುರುಡರೂ ಸಹ ತಮ್ಮ ಅಂಧತ್ವನ್ನು ಮರೆತಿದ್ದರು ಏಕೆಂದರೆ ಬಹಿರಂಗದಲ್ಲಿ ಅವರು ಅಂಧರಾಗಿದ್ದರೂ ತಮ್ಮ ಅಂತರಂಗದ ಅರಿವಿನ ಕಣ್ಣನ್ನು ಅರಿತಿದ್ದರು. ಬಹಿರಂಗದಲ್ಲಿ ಕುಂಟರೂ ತಮಗೆ ಕಾಲಿಲ್ಲದಿರುವುದನ್ನು ಮರೆತಿದ್ದರು. ಏಕೆಂದರೆ ಅವರಿಗೆ ಬಸವಣ್ಣ ನುಡಿಯೊಳಗೆ ನಡೆಯೊಂದಾಗಿಸಿಕೊಂಡು ಹೇಗೆ ನಡೆಯಬೇಕೆಂಬ ನಡೆಯನ್ನು ಕಲಿಸಿದ್ದರು. ಅನುಭಾವ ಲೋಕಕ್ಕೆ ಹೋಗುವ ಕಾಲನ್ನು ಮತ್ತು ಅನುಭಾವವನ್ನರಿಯಲು ಬೇಕಾದ ಅರಿವಿನ ಕಣ್ಣನ್ನು ಕೊಟ್ಟದ್ದರೆಂದು ಸಿದ್ಧರಾಮ ಮನದುಂಬಿ ನೆನೆಯುತ್ತಾರೆ.

ಮುಂದುವರೆದು "ಗುರುವಿಂಗಾದಡೆಯೂ ಬಸವಣ್ಣನೇ ಬೇಕು; ಲಿಂಗಕ್ಕಾದಡೆಯೂ ಬಸವಣ್ಣನೇ ಬೇಕು; ಜಂಗಮಕ್ಕಾದಡೆಯೂ ಬಸವಣ್ಣನೇ ಬೇಕು" ಎನ್ನುತ್ತ ಬಸವನ ಜಗದಗಲದ ಇಷ್ಟಲಿಂಗದ ಅಗಮ್ಯತೆಯನ್ನು ವಿಚಾರದಲ್ಲಿ ಗೋಚರಿಸುವಂತೆ ಮಾಡುತ್ತಾರೆ. ಇಷ್ಟಲಿಂಗವನ್ನು ಪೂಜಿಸಿಕೊಳ್ಳುವುದನ್ನು ಬಸವಣ್ಣನಿಂದ ಕಲಿತೆ ಹಾಗಾಗಿ ಧರ್ಮವೆಂದರೆ ದೇವರೆಂದರೆ ನಮ್ಮ ಒಳಗಿನ ಮತ್ತು ಹೊರಗಿನ ದರ್ಶನಗಳ ಮಾಲಿಕನಾಗಿರುವ ಅರಿವು. ಅಂಥ ಅರಿವು ಎಂದರೇನೆಂದರಿಯುವ ಮೂಲಕ ಆ ಅರಿವೇ ನಮ್ಮೊಳಗಿರುವ ಅನುಭಾವದ ಬೆಳಕಿನ ಬಯಲು ಎಂದರಿತೆ ಎನ್ನುತ್ತಾರೆ.

"ತನುವಿಗೊಳಗಾದಾತ ಗುರುವೇ?, ಮನಕ್ಕೊಳಗಾದಾತ ಲಿಂಗವೇ? ಧನಕ್ಕೊಳಗಾದಾತ ಜಂಗಮವೇ? ತನು-ಮನ-ಧನ ತನ್ನ ಮನಕ್ಕಲ್ಲದೇ ಗುರು-ಲಿಂಗ-ಜಂಗಮದಲ್ಲುಂಟೆ?





ಕಪಿಸಿದ್ಧಮಲ್ಲಿಕಾರ್ಜುನ" ಎಂಬ ಇವರ ವಚನ ನನ್ನನ್ನು ಅನುಭಾವಿಕವಾಗಿ ಹೆಚ್ಚು ಅಲ್ಲಾಡಿಸಿತು. ಸಾಧಕನ ತನು ತನ್ನೊಳಗಿನ ಗುರುವನ್ನು ಅರಿಯಬೇಕು ಆದರೆ ಆ ಒಳಗಿನ ಅರಿವೆಂಬ ಗುರುವೇ ತನುವಿಗೊಳಗಾದರೆ ಗುರುವಾಗುವುದು ಹೇಗೆ? ಒಳಗಿನ ಅರಿವೆಂಬ ಗುರು ಇಡೀ ತನುವನ್ನು ಪರಿವರ್ತಿಸಬೇಕೇ ಹೊರತು ತನುವೇ ಅರಿವೆಂಬ ಗುರುವನ್ನು ಆವರಿಸಿಕೊಳ್ಳುವುದಲ್ಲವೆನ್ನುತ್ತಾರೆ. ಜಂಗಮ ಸೇವೆಯಲ್ಲಿದ್ದಾತನಿಗೆ ಧನ ನಗಣ್ಯವಾಗಿರಬೇಕು. ಧನ ಬೇಡವೇ ಎಂದಲ್ಲ ಜಂಗಮ ಸೇವೆಗೆ ಅದೊಂದು ಮಾಧ್ಯಮವಾಗಿರಬೇಕಷ್ಟೇ. ಆದರೆ ಆ ಧನವೇ ಜಂಗಮ ಸೇವೆ ಮಾಡುವಾತನನ್ನು ತನ್ನೊಳಗಾಗಿಸಿಕೊಳ್ಳಬಾರದೆನ್ನುತ್ತಾರೆ. ಹೀಗೆ ತನು, ಮನ, ಧನಗಳು ನಮ್ಮ ನಮ್ಮ ಮನಕ್ಕಷ್ಟೇ ಸೀಮಿತವಾಗಿರಬೇಕು. ಗುರು ಲಿಂಗ ಜಂಗಮದಲ್ಲಿ ತನುಮನಧನಗಳು ಭೌತಿಕವಾಗಿ ಗೌಣವಾಗಿರಬೇಕು. ಏಕೆಂದರೆ ಗುರು ಲಿಂಗ ಜಂಗಮಗಳ ವ್ಯಾಪ್ತಿ ವಿಶಾಲವಾಗಿದ್ದು ಅದು ಎಲ್ಲ ಎಲ್ಲೆಗಳನ್ನು ಮೀರಿದ್ದಾಗಿರುತ್ತದೆ ಹಾಗೆ ಅವೆಲ್ಲವನ್ನು ಮೀರಿದ್ದ ಕಾರಣ ಗುರು ಲಿಂಗ ಜಂಗಮ ತತ್ವಗಳು ಶರಣ ಸಂಕುಲದಲ್ಲಿ ತುಂಬಾ ವಿಶಿಷ್ಠತೆಯನ್ನು ಹೊಂದಿದ್ದಷ್ಟೇ ಅಲ್ಲ ವಿಶ್ವಕ್ಕೆ ವಿಶಿಷ್ಠ ಪಥವನ್ನು ತೋರಿದ್ದಾಗಿವೆ.

ಕರ್ಮಯೋಗದಲ್ಲಿದ್ದ ಸಿದ್ಧರಾಮನ ಸಮರ್ಪಣಾ ಭಾವವು ಜಂಗಮ ಸೇವೆಯಲ್ಲಿ ಕಾಯಕವಾದಾಗ ಅಂಥ ಕಾಯಕವನ್ನು ಮಾಡುತ್ತಲೇ ಶಿವಯೋಗಿಯಾದ ಸಿದ್ಧರಾಮನ ಸಾಧನೆಗೆ ಹಲವು ಆಯಾಮಗಳಲ್ಲಿ ಹಲವರ ಸಹಾಯದಿಂದ ಅಲ್ಲಿ ಸಿದ್ಧತೆ ನಡೆದಿತ್ತು. ಹಾಗಾಗಿ ಸಿದ್ಧರಾಮ ಅಳಿದರೂ ಆತನ ವಿಚಾರಗಳು ಆತನ ಸ್ಥಾವರಗಳಲ್ಲಡಗದೇ ಇಂದಿಗೂ ವಿವಿಧ ರೂಪದಲ್ಲಿ ಜಂಗಮವಾಗುತ್ತಿವೆ. ಹೀಗಾಗಿ ಆತನ ಸ್ಥಾವರಗಳೂ ಬರೀ ಕಟ್ಟಡದ ಗುಡಿಗಳಾಗಲೀ, ಕೆರೆ ಭಾವಿಗಳಾಗಲೀ ಅಷ್ಟೇ ಅಲ್ಲ ನಮ್ಮ ಅಂಗವೂ ಸ್ಥಾವರವಾಗಿ ಅದರೊಳಗಿನ ಲಿಂಗಗುಣಗಳನ್ನು ಜಾಗೃತಗೊಳಿಸಿಕೊಳ್ಳುವ ಮೂಲಕ ನಮ್ಮಂಗವೇ ಲಿಂಗವನ್ನಾಗಿಸಿಕೊಂಡು ನಾವೇ ಜಂಗಮವಾಗುವದನ್ನು ಸೂಚಿಸುತ್ತವೆ. ಹೀಗಾಗಿ ಇಂಥವುಗಳು ಬರೀ ಸ್ಥಾವರಗಳಲ್ಲ ಅಣ್ಣ ಅವುಗಳೊಳಗೇ ಲಿಂಗತ್ವವಿದೆ ಅದನ್ನರಿತು ಬಾಳುವ ಮೂಲಕ ಜಂಗಮಗೊಳ್ಳಬೇಕಿದೆ. ಇದನ್ನು ಗಮನಿಸುವ ದೃಷ್ಠಿ ನಮಗಿರಬೇಕಷ್ಟೆ. □

**ವಿಷ ಕೊಲ್ಲುವಲ್ಲಿ ಹಾವೇನ ಮಾಡುವುದು**
**ಉಂಬ ಅನ್ನ ನಂಜಾಗಿಹಲ್ಲಿ ಇಕ್ಕಿದವಳಿಗೆ ಅಂಜಿಕೆಯುಂಟೆ**
**ತನ್ನ ಇಂದ್ರಿಯ ತನ್ನ ತಿಂಬಲ್ಲಿ**
**ವಸ್ತುವಿನ ಮೇಲೆ ಹಂಗ ಹಾಕುವ ಭಂಡರಿಗೆ ಇಲ್ಲಾ ಎಂದೆ**
**ಸಗರದ ಬೊಮ್ಮನೊಡೆಯ ತನುಮನ**
**ಸಂಗಮೇಶ್ವರಲಿಂಗವು**

# ನುಲಿಯ ಚಂದಯ್ಯ ಮತ್ತು ಕಾಯಕನಿಷ್ಠೆ

ಡಾ. ಸಿ.ವಿ. ಪ್ರಭುಸ್ವಾಮಿಮಠ

ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ
ಚಿತ್ತ ವಿಚ್ಛಂದವಾಗದಿರಬೇಕು
ನೇಮದ ಕೂಲಿಯಂದಿನ ನಿತ್ಯ ನೇಮದಲ್ಲಿ ಸಂದಿಲ್ಲದಿರಬೇಕು
ನೇಮದ ಕೂಲಿಯ ಬಿಟ್ಟು
ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದಡೆ
ತಾ ಮಾಡಿರುವ ಸೇವೆ ನಷ್ಟವಯ್ಯಾ
ನಿನ್ನಾಸೆಯ ವೇಷದ ಪಾಶಕ್ಕೆ ನೀನೆ ಹೋಗು.

ಬಸವಣ್ಣನವರ ಸಮಕಾಲೀನ ವಚನಕಾರರಲ್ಲಿ ತನ್ನ ಸತ್ಯಶುದ್ಧಕಾಯಕ ನಿಷ್ಠೆಯಿಂದ ನುಲಿಯ ಚಂದಯ್ಯ ಪ್ರಸಿದ್ಧನಾಗಿದ್ದಾನೆ. ನಿತ್ಯ ಕಾಡಿಗೆ ಹೋಗಿ, ಮೆದೆಹುಲ್ಲು ತಂದು ಹದ ಮಾಡಿ ನುಲಿ, ಕಣ್ಣಿ, ಹಗ್ಗ ಹೊಸೆದು ಅದನ್ನು ಮಾರಿಬಂದ ಹಣದಲ್ಲಿ ಜಂಗಮ ಸೇವೆಯನ್ನು ಮಾಡಿ ಸಂತೃಪ್ತಿಯನ್ನು ಹೊಂದುವುದು ಚಂದಯ್ಯನ ನಿತ್ಯ ಕಾಯಕ ಜೀವನವಾಗಿತ್ತು. ಪ್ರಸ್ತುತ ವಚನದಲ್ಲಿ ಚಂದಯ್ಯ ಕಾಯಕದ ಸ್ವರೂಪ ಅದರಲ್ಲಿರಬೇಕಾದ ನಿಷ್ಠೆ, ಅದರ ಫಲ, ಅದು ಸಲ್ಲಬೇಕಾದ ಮಾರ್ಗವನ್ನು ಕುರಿತು ತನ್ನದೇ ಆದ ತಾತ್ವಿಕ ದೃಷ್ಟಿಕೋನವನ್ನು ವ್ಯಕ್ತಪಡಿಸಿದ್ದಾನೆ.

ಸತ್ಯ ಶುದ್ಧ ಕಾಯಕದಿಂದ ಬಂದ ಫಲ ಎಷ್ಟೇ ಆಗಿರಲಿ ಮನಸ್ಸು ಅದರ ಲಯದಲ್ಲೇ ಲೀನವಾಗಿರಬೇಕು. ನಿತ್ಯಮಾಡುವ ನೇಮದ ಕೂಲಿ–ಕಾಯಕದಲ್ಲಿ ಮನಸ್ಸು ನಿಷ್ಠವಾಗಿರಬೇಕು. ಆದರೆ ಹೆಚ್ಚಿನ ಧನದಾಸೆಯಿಂದ ಆ ಕಾಯಕವನ್ನು ತೊರೆದು ದ್ರವ್ಯವನ್ನು ಬೆನ್ನು ಹತ್ತಿದರೆ ಅದರಿಂದ ಅವನು ಮಾಡುವ ಜಂಗಮ ಸೇವೆಗೆ ಅಪಚಾರವಾಗುತ್ತದೆ. ಅಂಥ ಆಸೆಯನ್ನು ಬೆನ್ನು ಹತ್ತಿದ ವ್ಯಕ್ತಿಯ ಜೀವನ ಅದೊಂದು ನಟನೆಯ ವೇಷವಿದ್ದಂತೆ. ಅದನ್ನು ಬೆನ್ನು ಹತ್ತಿದವನು ಕರ್ಮದ ಬಂಧನಕ್ಕೆ ಒಳಗಾಗಿ ಬದುಕನ್ನು ನಾಶಮಾಡಿಕೊಳ್ಳುತ್ತಾನೆ ಎಂಬುದನ್ನು 'ನಿನ್ನಾಸೆಯ ವೇಷದ ಪಾಶಕ್ಕೆ ನೀನೆ ಹೋಗು' ಎಂಬ ಮಾತಿನಲ್ಲಿ ಚಂದಯ್ಯನು ಎಚ್ಚರಿಸಿದ್ದಾನೆ.

ನಂ. 50, 'ಬೆಳಗು, ಭಾರತಿ ಎನ್‌ಕ್ಲೇವ್, ಎಂ.ಕೆ. ಹಳ್ಳಿ, ಭೋಗಾದಿ ಗದ್ದಿಗೆ ರಸ್ತೆ, ಮೈಸೂರು 570 026
94491 21087



ಇಲ್ಲಿ ಚಂದಯ್ಯ ಕಾಯಕದಲ್ಲಿ ತಾರತಮ್ಯವಿರಕೂಡದು. ಅದರ ಫಲವನ್ನು ದುರಾಸೆಯಿಂದ ಬೆನ್ನು ಹತ್ತಕೂಡದು, ಅದರಲ್ಲಿ ನೇಮನಿಷ್ಠೆ ಮುಖ್ಯ, ಕಾಯಕ ನಿಷ್ಠೆಯನ್ನು ತೊರೆದು ಅಧಿಕ ಸಂಪತ್ತನ್ನು ಬೆನ್ನು ಹತ್ತಿದವನ ಬದುಕು ಇನ್ನಷ್ಟು ಆಸೆಯ ಬಂಧನಕ್ಕೆ ಒಳಗಾಗುತ್ತದೆಂಬುದನ್ನು ಕುರಿತು ಚಂದಯ್ಯ ಎಚ್ಚರಿಸಿದ್ದಾನೆ. ಈ ದೃಷ್ಟಿಯಿಂದ ಹನ್ನೆರಡನೆಯ ಶತಮಾನದ ಶರಣರು ನಡೆಸಿದ ಕಾಯಕ ಸಿದ್ಧಾಂತದ ಚಿಂತನೆ ಆಧುನಿಕ ಕಾಲದ ಆರ್ಥಿಕ ಚಿಂತನೆಯ ದೃಷ್ಟಿಯಿಂದ ಗಮನಾರ್ಹವಾಗಿದೆ. ಅದರಲ್ಲಿ ಚಂದಯ್ಯನಂಥ ಶರಣರು ನಡೆಸಿದ ಚರ್ಚೆ, ವಾಗ್ವಾದ, ಎತ್ತಿದ ಪ್ರಶ್ನೆಗಳು ಗಮನಾರ್ಹವಾಗಿವೆ. ಪ್ರಸ್ತುತ ವಚನ ಅಂಥ ವಿವೇಚನೆಯ ಒಂದು ಮಾದರಿ ಎನ್ನಬಹುದು. ಈ ವಚನಕ್ಕೆ ಪೂರಕವಾಗಿ ಚಂದಯ್ಯನ ಬೇರೆ ವಚನಗಳಲ್ಲಿ ಪ್ರಸ್ತಾಪವಾಗುವ ಮಾತುಗಳನ್ನು ಗಮನಿಸಬೇಕು.

ಕಾರೆಯಕಾಯಿ ಕಾಡಸೊಪ್ಪಾದರೂ
ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ
ದುರಾಸೆಯಿಂದ ಬಂದುದು ಅನರ್ಪಿತ

ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ
ಕಂಡಕಂಡವರ ಬೇಡಿತಂದು
ಜಂಗಮ ಲಿಂಗಕ್ಕೆ ಮಾಡಿದೆನೆಂಬ
ದಂದುಗದ ಮಾಟ ಲಿಂಗ ನೈವೇದ್ಯಕ್ಕೆ ಸಲ್ಲದು
ತನುಕರಗಿ ಮನಬಳಲಿ ಬಂದಂತರದನುವರಿದು
ಸಂದಿಲ್ಲದೆ ಸಂಶಯವಿಲ್ಲದೆ ಜಂಗಮ ಲಿಂಗಕ್ಕೆ
ದಾಸೋಹವ ಮಾಡುವುದೆ ಮಾಟ

ವಸ್ತು ಎಂಥದಾದರೂ ಅದು ಸತ್ಯ ಶುದ್ಧ ಕಾಯಕ ಮುಖೇನ ಬರಬೇಕು. ಅದು ಅನ್ಯರಿಗೆ ಹಿಂಸೆಯನ್ನು ಕೊಟ್ಟಾಗಲಿ ಅಥವಾ ಕಂಡಕಂಡವರನ್ನು ದೈನ್ಯತೆಯಿಂದ ಬೇಡಿ ತಂದುದಾಗಲಿ ಆಗಿರಬಾರದು.

ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯವಾದರೆ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು.
ಆವಾವ ಕಾಯಕದಲ್ಲಿ ಬಂದರೂ
ಭಾವ ಶುದ್ಧವಾಗಿ ಗುರುಲಿಂಗ ಜಂಗಮಕ್ಕೆ
ಮಾಡುವುದೇ ಶಿವಪೂಜೆ.

ಕಾಯಕದ ಹಿಂದಿನ ಭಾವ ಮುಖ್ಯ. ಅದು ಶುದ್ಧವಾಗಿರಬೇಕು. ಅಂದರೆ ಮಾತ್ರ ಅದು ಶಿವನ ಅರ್ಪಣೆಗೆ ಯೋಗ್ಯವಾಗಿರುತ್ತದೆ ಎಂದಿರುವುದು ಚಂದಯ್ಯನ ಪ್ರಸ್ತುತ ವಚನದ ಚಿಂತನೆಯನ್ನು ಸ್ಪಷ್ಟಪಡಿಸುವಂತಿದೆ. ಚಂದಯ್ಯ ತನ್ನ ಕಾಯಕ ನಿಷ್ಠೆಯನ್ನು ಯಾವ ಎತ್ತರಕ್ಕೆ ಒಯ್ಯುತ್ತಾನೆಂದರೆ,

'ಕಾಯಕದಿಂದವೇ ಜೀವನ್ಮುಕ್ತಿ 'ಎಂದು ಹೇಳುತ್ತಾನೆ. ಈ ಮಾತನ್ನು ಬಸವಣ್ಣನವರ 'ಕಾಯಕವೇ ಕೈಲಾಸ' ಎಂಬುದರ ಜೊತೆಗೆ ಹೋಲಿಸಿ ನೋಡಬಹುದು. ಪ್ರಾಚೀನ ಚಾರ್ವಾಕವಾದ ಆಧುನಿಕ ಮಾರ್ಕ್ಸವಾದದಂಥವು ಕೇವಲ ಐಂದ್ರಿಕ ಭೌತಿಕಭೋಗ, ಅರ್ಥ ಸಂಗ್ರಹ ಮತ್ತು ವಿತರಣೆಯ ಮಿತಿಗೆ ಅಂಟಿಕೊಂಡು ನಿಂತಿರುವುದನ್ನು ಬಸವಣ್ಣ ಚಂದಯ್ಯರಂಥ ಶರಣರ ಕಾಯಕ ಚಿಂತನೆಯ ಜೊತೆಗೆ ಹೋಲಿಸಿ ನೋಡಿದಾಗ ಅವರ ಆಲೋಚನೆಯ ಔನ್ನತ್ಯದ ಅರಿವು ಅನುಭವಕ್ಕೆ ಬರುತ್ತದೆ.

ಚಂದಯ್ಯನ ಈ ವಚನದ ಅಭಿವ್ಯಕ್ತಿ ಆಕೃತಿಯ ದೃಷ್ಟಿಯಿಂದ ಅಂಥ ಮಹತ್ವಾಕಾಂಕ್ಷೆಯ ವಚನವಲ್ಲದಿದ್ದರೂ, ಆತನ ಆಲೋಚನೆಯ ಓಘಕ್ಕೆ ವಚನಲಾಯವು ನಿರರ್ಗಳವಾಗಿ ಪ್ರವಹಿಸುವುದನ್ನು ಗಮನಿಸಬೇಕು. ಆತನು ರೂಪಿಸಿರುವ ನುಡಿಗಟ್ಟುಗಳು ಗಮನಾರ್ಹವಾಗಿವೆ. 'ಸತ್ಯ ಶುದ್ಧ ಕಾಯಕ', 'ಚಿತ್ತ ವಿಚ್ಛಂದ', 'ನೇಮದ ಕೂಲಿ' ಮುಂತಾದವು ಇವುಗಳಲ್ಲಿ 'ಆಸೆಯ ವೇಷದ ಪಾಶ' ಎಂಬ ಹೋಲಿಕೆ ಅತ್ಯಂತ ವಿಶೇಷವಾಗಿದೆ. ಆಸೆಯ ಕಾರಣವಾಗಿ ನಿರ್ಮಿಸಿಕೊಂಡ ಪಾತ್ರ, ಅದೊಂದು ವೇಷಧಾರಣೆ ನಟನೆ, ಅದೇ ಒಂದು ಬಂಧನ ಎಂಬ ಅವನ ಕಲ್ಪನೆ ಮಾರ್ಮಿಕವಾಗಿದೆ. ಬಹುಶಃ ಚಂದಯ್ಯನು ಹೇಳುವಂತೆ ಲೋಕದ ಎಲ್ಲ ಜೀವಗಳು ಇಂಥ ಆಸೆಯ ವೇಷವನ್ನು ತಾಳುವ ಮೂಲಕವಾಗಿಯೇ ಬಂಧನಕ್ಕೊಳಗಾಗುತ್ತಾರೆ ಎನ್ನಿಸುತ್ತದೆ. ಇಂಥ ಜೀವಿಗಳ ಬಿಡುಗಡೆ ಹೇಗೆ ಎಂಬುದೇ ಚಂದಯ್ಯನನ್ನು ನಿರಂತರ ಕಾಡಿರುವ ಪ್ರಶ್ನೆಯಾಗಿದೆ ಎನ್ನಿಸುತ್ತದೆ.

□

ತನುವೆಂಬ ಹುತ್ತಕ್ಕೆ ಮನವೆಂಬ ಸರ್ಪ ಆವರಿಸಿ
ಹೆಡೆಯೆತ್ತಿ ಆಡುತ್ತಿರಲು
ಆ ಸರ್ಪನ ಕಂಡು ನಾ ಹೆದರಿಕೊಂಡು
ಗುರುಕರುಣವೆಂಬ ಪರುಷವ ತಂದು ಮುಟ್ಟಿಸಲು
ನೋಟ ನಿಂದಿತ್ತು
ಹೆಡೆ ಅಡಗಿತ್ತು
ಹಾವು ಬಯಲಾಯಿತ್ತು
ಆ ಗುರುಕರುಣವೆಂಬ ಪರುಷವೆ ನಿಂದಿತ್ತು
ನಿಂದ ಪರುಷವನೆ ಕೊಂಡು ನಿಜದಲ್ಲಿ ನಿರ್ವಯಲಾಗುವ
ಶರಣರ ಪಾದವ ನಂಬಿ ಕೆಟ್ಟು ಬಟ್ಟಬಯಲಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ





ನಿರ್ವಚನ ೩೬

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

ಎಲ್ಲರ ಗಂಡರ ಶೃಂಗಾರದ ಪರಿಯಲ್ಲ,
ಎನ್ನ ನಲ್ಲನ ಶೃಂಗಾರದ ಪರಿ ಬೇರೆ.
ಶಿರದಲ್ಲಿ ಕಂಕಣ, ಉರದಮೇಲಂದುಗೆ, ಕಿವಿಯಲ್ಲಿ ಹಾವುಗೆ,
ಉಭಯ ಸಿರಿವಂತನ ಮೊಳಕಾಲಲ್ಲಿ ಜಳವಟ್ಟಿಗೆ.
ಉಂಗುಟದಲ್ಲಿ ಮೂಕುತಿ_ಇದುಜಾಣರಿಗೆ ಜಗುಳಿಕೆ.
ಚೆನ್ನಮಲ್ಲಿಕಾರ್ಜುನಯ್ಯನ ಶೃಂಗಾರದ ಪರಿಬೇರೆ.

*ವ.೯೨, ಪು.೩೨, ಶಿವಶರಣೆಯರ ವಚನಸಂಪುಟ, ಸಂ:ಡಾ.ವೀ.ರಾ. ಸ.ವ.ಸಂ.೫, ೧೯೯೩)*

ಇದು ಅಪ್ಪಟ ಬೆಡಗ ಒಳಗೊಂಡ ಇನ್ನೊಂದು ವಚನ. ಪರಿಚಿತರು ಚಿತ್ತ ಕೆಡಿಸುವ ರೂಪಕ, ವಿಚಿತ್ರ ವೈರುಧ್ಯ, ಗುಪ್ತ ವೈಯಕ್ತಿಕ ಸಂಕೇತಗಳಿಂದ ತಿವಿದು ಬೆಚ್ಚಿಬೀಳಿಸುವ ಒಗಟಿನ ಮಾದರಿ ಬೆಡಗಿನ ವಚನಗಳು ಒಂದೇಟಿಗೆ ನಿಖರ ಶಬ್ದಾರ್ಥದ ನಿಘಂಟುಗಳಿಗೆಲ್ಲ ಲಗಾಟ ಹೊಡೆಸಿಬಿಡುತ್ತವೆ. ಬೆಡಗೆನ್ನುವುದೆ ಊಹಾತೀತ ಬಹ್ವರ್ಥ ಮತ್ತು ಬಗೆಬಗೆ ಭಾವ ಛಾಯೆಯ ಬಹುರೂಪಿ ಕಾವ್ಯಾತ್ಮಕ ಸೃಷ್ಟಿ. ನಿರ್ದಿಷ್ಟ ಏಕಾರ್ಥದ ಪರಿಮಿತಿಯನ್ನೆ ನಿರಾಕರಿಸಿ ನಿವಾಳಿಸಿ ಎಸೆವಂತದು. ಮನೋರಂಗದಲ್ಲಿ ಬಹುಬಣ್ಣಗಳ ಸಮೂಹ ನೃತ್ಯ ಹೂಡುವಂತದ್ದು. ಕಲ್ಪನೆ ನವಿಲು ಗರಿಗೆದರಿ ಕುಣಿವಂತೆ ಪ್ರಚೋದಿಸುವಂತದು. ಭಾವಹಂಸ ನಾದಾಲಾಪಗೈವಂತೆ ಮೋಡಿ ಮಾಡುವಂತದು. ಬೆಡಗು ಎಲ್ಲ ಶರಣರ ಕೈಯಲಗಲ್ಲ. ಅನುಭಾವ ಶಿಖರವೇರಿದ, ಸ್ವಾನುಭಾವ ಸಾಗರದಾಳಕ್ಕಿಳಿದ ಧ್ಯಾನಸ್ಥಾತ್ಮಗಳಿಗೆ ಮಾತ್ರದಕ್ಕುವ ಮಂತ್ರ ಶಕ್ತಿಯದು. ಲೌಕಿಕ ಅನುಭವ ಮತ್ತು ಅಲೌಕಿಕ ಅನುಭಾವದ ಭೂಮ್ಯಾಂತರಿಕ್ಷ ಭಾವಾಂತರ ಕಟ್ಟಿಕೊಡುವ ಮಹಾಶರಣ ಕಾರಣಿಕವೆ ಬೆಡಗು.

ಭಾರತೀಯ ಸಂಸ್ಕೃತಿ ದೇವಾನು ದೇವತೆಗಳೆಲ್ಲ ವಿಲಕ್ಷಣ ರೂಪ ವಿಚಿತ್ರಸ್ವರೂಪಕ್ಕೆ ಹೆಸರಾದವರೆ. ನಮ್ಮ ಮುಕ್ಕಣ್ಣನೆ ಈ ವೈಚಿತ್ರ್ಯ ವೈಲಕ್ಷಣ್ಯದ ಉದ್ಘಾಟಕ. ಏನವನ ಚಿಮ್ಮುಚಿಲುಮೆಜಟೆ! ಮಿಂಚು ಚಂದ್ರಗರಿ! ಹಣೆಗಣ್ಣುರಿ! ಕೊರಳಗರಳಹೀರ್ವ ಸರ್ಪಸುತ್ತು! ಆನೆ\ಹುಲಿ ಚರ್ಮದಿರಿಸು! ಹಿಮಗಟ್ಟಿ ಕೂರ್ವ ಯೋಗಿ ಭಂಗಿ! ಮೂರ್ಲೋಕ ನಡುಗಿಸುವ

'ಅನಿಮಿಷ', ಕ್ರಾಸ್-7, ದುರ್ಗಿಗುಡಿ ಹಂತ 1, ಹೊನ್ನಾಳಿ - 577 217, ದಾವಣಗೆರೆ ಜಿಲ್ಲೆ
98801 30203

ನಾಟ್ಯಭಂಗಿ! ಎಲ್ಲವೂ ವಿಸ್ಮಯಕಾರಕ! ದಿಗ್ಭ್ರಮೆಗೊ ಭಯಾಕ್ರಾಂತತೆಗೊ ಈಡುಮಾಡಿ ಎಲ್ಲರ ದಿಂಙ್ಮೂಢರಾಗಿಸೊ ಈ ಅಸಮಾಕ್ಷನ ಕ್ರೋಧಕಾರುಣ್ಯ ಎರಡೂ ನಮ್ಮಳವಿಗೆ ಮೀರಿದವೆ. ಅವನ ವಿಚಿತ್ರ ಅಲಂಕರಣ ಶೈಲಿಯ ಇನ್ನೈದು ನಗೆಪಾಟಲ ಉದಾಹರಣೆ ಬಣ್ಣಿಸತ್ತೆ ಈ ವಚನ. ಸಾಮಾನ್ಯವಾಗಿ ಎಲ್ಲರೂ ಕೈಗೆಕಟ್ಟಿಕೊಳ್ಳುವ ಕಂಕಣ ಇಲ್ಲಿ ಶಿವನ ತಲೆಗೇರಿದೆ. ಕಣಕಾಲಲ್ಲಿ ಕಟ್ಟಿಕೊಳ್ಳುವ ಕಾಲಂದುಗೆ ಉರ\ಎದೆಮೇಲೆ ಏರಿ ಕೂತಿದೆ. ಕಾಲೊತ್ತು ಪಾದರಕ್ಷೆಗಳು ಕಿವಿಗೇರಿ ಜುಮುಕಿಯಂತೆ ತೂಗಾಡುತ್ತಿವೆ. ಮತ್ತೆಲ್ಲೊ ಇರಬೇಕಿದ್ದ ಜಳವಟ್ಟಿಗೆ ಎಂಬೊಡವೆ ಮೊಣಕಾಲಿಗೆ ಜಾರಿಹೋಗಿದೆ. ಮೂಗು ಸಿಂಗರಿಸಬೇಕಾದ ಮೂಕುತಿ ಹೆಬ್ಬೆರಳ ಹೊಕ್ಕಿದೆ. ಹೀಗೆ ಎಲ್ಲೆಲ್ಲೊ ಇರಬೇಕಾದ ವಸ್ತುಗಳೆಲ್ಲ ಇನ್ನೆಲ್ಲೊ ವಕ್ರಿಸಿ ಏನೆಂದರ್ಥವಾಗದೆ ಸತಾಯಿಸಿ ಮಿದುಳ ಕಾಯಿಸುತ್ತಿವೆ. ಯಾವ ಒಡವೆ ಎಲ್ಲಿದ್ದರೆ ಲಕ್ಷಣವೊ ಅಲ್ಲಿರದೆ ಮತ್ತೆಲ್ಲೊ ತಮಾಶೆಯಾಗಿ ತೊಡರಿಕೊಂಡು ದರ್ಶನಕ್ಕೆ ಬಂದವರನ್ನೆಲ್ಲ ದಂಗುಬಡಿಸುವದೆ ಈ ವಿಲಕ್ಷಣ ಮೂರ್ತಿಯ ಅನಾದಿ ಲೀಲೆ! 'ಇದು ಜಾಣರಿಗೆ ಜಗುಳಿಕೆ' =ಜಾರುನುಡಿ\ಸವಾಲು ಎಂದಿದ್ದಾಳೆ ಅಕ್ಕ. ಅಂದರೆ ತುಂಬ ಚೆನ್ನಾಗಿ ಬಲ್ಲವರಷ್ಟೆ ಒಡೆಯಬಲ್ಲ ಬಿಕ್ಕಟ್ಟಿನ ನುಡಿ. ಒಗಚುರುಚಿ ಕಚಗುಳಿಯಿಕ್ಕಿ ಅಚ್ಚರಿಗೊಳಿಸಿಬಿಡುವ ನುಡಿ. ಶೆಟ್ಟಿ ಶೃಂಗಾರವಾಗುವುದರಲ್ಲಿ ಪಟ್ಟಣವೆ ಕೆಟ್ಟಿತು ಎಂಬ ನಿಗೂಢ ಹಳೆಗಾದೆ ಪರೋಕ್ಷ ನೆನಪಿಗೆ ತರುವ ವಚನವಿದು. ವಿಪರೀತ ಶೃಂಗಾರದ ಗೀಳುಳ್ಳ ಶ್ರೀಶೈಲ ಪಟ್ಟಣಶೆಟ್ಟಿ ಚೆನ್ನಮಲ್ಲಿಕಾರ್ಜುನನ ಈ ಸರ್ವತಂತ್ರ ಸ್ವತಂತ್ರ ಪ್ರಸಾಧನ ಸಂಹಿತೆಯ ನಿಜವಾದ ಭಾವಾರ್ಥ ಹೇಗೆ ದಕ್ಕೀತು? ಕೈಕಡಗವಾಗಬೇಕಿದ್ದ ಚಂದ್ರಕಂಕಣ ಜಟಾಶಿಖರವೇರಿ ಬೆಳಗುತ್ತಿದೆ ಎಂಬಚ್ಚರಿಯೆ? ಅಥವ ಕರದಲ್ಲಿ ಕಂಗೊಳಿಸಬೇಕಿದ್ದ ಜಲಕಂಕಣ ಸವತಿಯಂತೆ ತಲೆ ಮೇಲೇರಿ ಬಚ್ಚಿಟ್ಟುಕೊಂಡಿದೆ ಎಂಬ ಗುಮಾನಿಯೆ? ಹೆಜ್ಜೆಮೇಲೆ ಹೆಜ್ಜೆಯಿಟ್ಟು ಬರುವಾಗಿನ ಗೆಜ್ಜೆಸದ್ದು ಎದೆಬಡಿತದ ಅನಾಹತ ನಾದದಲ್ಲಿ ಅವಿನಾಭಾವದಿಂದ ಬೆರೆತಿದೆಯೆ? ದೂರಕ್ಕೆ ಹಾವು-ಗೆಯಂತೆ ಕಾಣುತ್ತಿರುವ, ಕೊರಳ ಸುತ್ತಿಕೊಂಡ ಹಾವಿನ ಹೆಡೆಗಳು ಶಿವನ ಕಿವಿಯಲ್ಲಿ ವಿಶುದ್ಧಿ ಬೀಜಮಂತ್ರ ಪಿಸುಗುಡುತ್ತಿವೆಯೆ? ಭೂ-ಕೈಲಾಸದ, ಗಂಗೆ-ಗೌರಿಯರ 'ಉಭಯಸಿರಿವಂತ' ಹರನ ಪ್ರಣಯಾಟವಿ ಪರಿಭ್ರಮಣದಲ್ಲಿ ಮುತ್ತಿನಹಾರ ಕಂಠೀಹಾರ ಭುಜಕೀರ್ತಿ ಎದೆಪದಕಗಳಿಗೆಲ್ಲ ದಿಕ್ಕುತೋಚದೆ ಎಗರಿ, ಮೊಳಕಾಲವರೆಗೂ ಜಾರಿಬಿದ್ದು ತಮಾಶೆಯಾಗಿ ತೊಡರಿಕೊಂಡಿವೆಯೆ? ಶಿವನ ಪ್ರೇಮಕಲಹಕ್ಕೆ ಬೆಚ್ಚಿಬೆದರಿ ನವಿರೆದ್ದು ನಾಚಿ ಹೆಂಡಿರಿಬ್ಬರ ವಜ್ರದಹರಳ ಮೂಕುತಿಗಳೂ ಕಳಚಿಬಿದ್ದು ಅವನ ಹೆಬ್ಬೆರಳಲ್ಲಿ ಬಂಧಿ(ಪ್ರಣಯ ಪ್ರತೀಕ!)ಯಾಗಿ ಎಲ್ಲರೂ ಮೂಗಿನ ಮೇಲೆ ಬೆಟ್ಟಿಡುವಂತೆ ಮಾಡಿವೆಯೆ? ಯಾರಿಗೆ ಗೊತ್ತು ಆ ಉಭಯರಮಣನ ಪ್ರೇಮಪುರಾಣ ಕಾಮಪ್ರತಾಪದ ಒಳಗುಟ್ಟು? ಕಣ್ಣಾರೆ ಕಂಡವರ್‍ಯಾರು ಆ ಒಲಿದ ವನಿತೆಯರಿಬ್ಬರ (ಇಬ್ಬರೂ ಪರ್ವತಪುತ್ರಿಯರೆ, ಅಕ್ಕತಂಗಿಯರೆ ಎನ್ನುವ ಉಪಕತೆಯೊಂದು!) ಪ್ರೇಮೇರ್ಶ್ಯಾಜನಿತ ಸುಮಧುರ ಸಂಚಿನ ರೋಮಾಂಚನಕಾರಿ ಕುರುಹು, ಪರಿಣಾಮ? ಅವರಿಬ್ಬರೆ ಸಾಲದೆಂದು ನಮ್ಮ ಕನ್ನಡ ಕುಲದಕ್ಕನೂ ಅವನನ್ನೆ ವರಿಸಿ ಕಾಡಿಬೇಡಿ ಕಿತ್ತಾಡಿ ಕೂಡಿದವಳಲ್ಲವೆ? ನಲ್ಲನಂತೆ ಒಲಿದು





ಬಂದು ಗಂಡನಾದವರಿದ್ದಾರೆ. ಗಂಡನಾದ ಮೇಲೂ ನಲ್ಲತನ ಉಳಿಸಿಕೊಂಡವರೂ ಸಿಕ್ಕಾರು ಅಪರೂಪಕ್ಕೆ. ಅಕ್ಕಗಂತೂ ಅವ ಬರಿ ನಲ್ಲನಷ್ಟೆ ಅಲ್ಲ. ಕೇವಲ ಗಂಡನೂ ಅಲ್ಲ. ಒಟ್ಟೊಟ್ಟಿಗೆ ಕೊನೆತನಕ ಕಟ್ಟಿಕೊಂಡ ಗಂಡನೂ, ಅಂತರಂಗದ ಕಾಲಾತೀತ ನಲ್ಲನೂ ಆಗಿರುವಂಥವನು. ಉಭಯ ಭಾವವಳಿಸಿ ಅವನ್ನೊಲಿಸಿಕೊಂಡು ಅನುಭಾವಿಕ ದಾಂಪತ್ಯದ ಒಗೆತನ ಗೈದು ಸುಖಸುರಕೊಂಡ ನಮ್ಮಕ್ಕ ಇತ್ತ ದಿರದಿಟ್ಟೆಯೂ ಹೌದು, ಅತ್ತ ಸಂತೃಪ್ತ ಪ್ರೇಮಪತ್ನಿಯೂ ಹೌದು. ಅದಕ್ಕೇ ಚೆನ್ನಮಲ್ಲಿಕಾರ್ಜುನ ಎಲ್ಲರ ಗಂಡರಂತಲ್ಲ, ಅವನ ಶೃಂಗಾರದ ಪರಿಯೆ ಬೇರೆ ಎಂಬುದು ಅವಳರಿವಲ್ಲಷ್ಟೆ ಇಂಗಿರುವ ವಿಶುದ್ಧ ಸತ್ಯ! ಅರಿತವರಾರು ಆ ಶೃಂಗಾರ ಪುರುಷನ ಅಲಂಕರಣ ಸಂಹಿತೆಗೆ ಇನ್ನೂ ಗಹನತಾತ್ವಿಕ ಸಾಂಕೇತಿಕ ಆಧ್ಯಾತಿಕ ಅನುಭಾವಿಕ ರಹಸ್ಯ ಲಗತ್ತಾಗಿದೆಯೊ ಎಂದು? ಈ ಬೆಡಗಿನ ರೂಪಕ ಸಂಕೇತ ಪ್ರತೀಕ ಪ್ರತಿಮೆಗಳ ಒಡಲಲ್ಲಿ ಇನ್ಯಾವ ಮಹಾನ್ ನಿಗೂಡಾರ್ಥ ಅಡಗಿದೆಯೊ ಎಂದು? ಸಿಂಗಳದ ಸಿದ್ಧಬಸವರಾಜ ದೇವರ 'ಬೆಡಗಿನ ವಚನಗಳು (ಟೀಕು ಸಹಿತ)'ದಂಥ ಪ್ರಾಚೀನಗ್ರಂಥ(?)(ಸಂ: ಎಂ.ಜೀವನ, ಪ್ರ:ಸಿಟಿ ಬುಕ್ ಸ್ಟಾಲ್ ಹುಬ್ಬಳ್ಳಿ, ಬೆಲೆ: ೩ರೂ.)ದ ಪರಿವಿಡಿಯಲ್ಲಿ ಅಕ್ಕನ ಹೆಸರಾಗಲಿ, ಪುಸ್ತಕದೊಳಗೆ ಅವಳ ಬೆಡಗಿನ ವಚನಗಳ ಪ್ರಸ್ತಾಪವಾಗಲಿ ಇಲ್ಲದಿರುವುದು ಸಖೇದಾಶ್ಚರ್ಯ ಸಂಗತಿಯೆನಿಸತ್ತೆ. ಆದರೆ ಈ ಅನುಭಾವವೆಂಬ ನಿಗೂಢ ವಿದ್ಯೆಯನ್ನಾಗಲಿ, ಅದರ ಅಭಿವ್ಯಕ್ತಿಯಾದ ಬೆಡಗಿನ ನುಡಿಯನ್ನಾಗಲಿ ಸುಮ್ಮನೆ ವೈಜ್ಞಾನಿಕ ವೈಚಾರಿಕ ತರ್ಕದ ಹಾದಿಯಾಸಿ ತಿಳಿಯಲು ಸಾಧ್ಯವೆಯಿಲ್ಲ, ಅದಕ್ಕೆ ಗುರುವಿನ ತೋರ್ಬೆರಳು, ಸ್ವಂತ ಸ್ವಾನುಭವ ಅತ್ಯಗತ್ಯ ಎಂಬುದು ಬಸವಣ್ಣಗೆ ಗೊತ್ತಿತ್ತು. ಅಣ್ಣನ ವಚನಗಳೂ ಸಿಂಗಳದ ಸಿದ್ಧಬಸವರಾಜ ದೇವರ ಟೀಕಿನ ವಚನಗಳ ಪುಸ್ತಕದಲ್ಲಿ ಸೇರಿಲ್ಲ. ಅದರರ್ಥ ಅವ ಬೆಡಗಿನ ವಚನ ಬರೆದಿಲ್ಲವೆಂದೆ? ತಾನೇನು ಅದ್ವೈತಾನುಭಾವಿ ಅಲ್ಲವೆಂದೂ, ಬೆಡಗಿನ ನುಡಿ ತನಗರ್ಥವಾಗದೆಂದೂ, ಇದಿರಿಟ್ಟು ಪೂಜಿಸಿ ಸೇವಿಸುವ ಸ್ವಾಮಿ ಭೃತ್ಯ ಸಂಬಂಧ\ ದೇವ-ದಾಸಭಾವವೆ ತನಗೆ ತಕ್ಕ ದಾರಿಯೆಂದೂ, ಯೋಗ್ಯತೆ ಸಿದ್ಧಿಸದೆ ಹಿರಿಯನುಭಾವಿ ಸ್ವಾನುಭಾವಿಗಳೊಡನೆ ಬರಿ ಹಸಿ ಚರ್ಚೆಗಿಳಿದು ಹುಸಿ ಸಮಾನತೆಗೆ ಬಡಿದಾಡಿ ಕೆಟ್ಟ ಅನನುಭವಿ ತಾನೆಂದೂ ಸೋಲೊಪ್ಪಿ ಶರಣಾಗತನಾಗಿ ನುಡಿವ ಬಸವಣ್ಣನ ಈ ವಚನ ಅಪ್ರಬುದ್ಧರನ್ನೆಲ್ಲ ಎಚ್ಚರಿಸುವಂತಿದೆ: 'ಶಬ್ದಸುಖಕ್ಕೆ ಮಚ್ಚಿ, ಮಾತಿಂಗೆ ಮಾತನೆ ಕೊಟ್ಟು, ಕೆಟ್ಟೆನಯ್ಯಾ!\ ಅನುಭಾವದ ಅಕ್ಕವೆಯಾಗದೆ, ಬಿಬ್ಬನೆ ಬಿರಿದೆನಯ್ಯಾ!\ ಅಮೃತದ ಕೊಡನ ತುಂಬಿ, ಒಡೆಯ ಹೊಯ್ದು, ಅರಸಲುಂಟೇ?\ ಸ್ವಾಮಿಭೃತ್ಯ ಸಂಬಂಧವೇ ಎನ್ನ ಭಕ್ತಿ.\ ಪ್ರತ್ಯುತ್ತರ ನಾಯಕನರಕ ಕೂಡಲಸಂಗಮದೇವಾ.' (ಬಸವಣ್ಣನವರ ವಚನಗಳು, ಸಂ: ಡಾ.ಎಂ.ಎಂ.ಕಲಬುರ್ಗಿ, ಸ.ವ.ಸಂ-೧, ೨೦೦೧, ವ.೨೯, ಪು.೭೩). ಅಕ್ಕವೆ=ಅಜೀರ್ಣ ಪದಅಕ್ಕವ್ವೆಯ ಮತ್ತೊಂದು ರೂಪವಾಗಿ ಶ್ಲೇಷಾರ್ಥಕ್ಕೂ ಸಂದೀತು. ಅಕ್ಕವೆ ಎಂದರೆ ಅಕ್ಕ(ನ ಅನುಭಾವ)ವೆ ಎಂದೂ ಅರ್ಥ ಜಿನುಗೀತು. ಇವೆಲ್ಲದರ ಹಿಂದಿರುವ ಬಸವಣ್ಣನ ಅಗಾಧ ವಿನಮ್ರತೆ, ಪಾರದರ್ಶಕ ಪ್ರಾಮಾಣಿಕತೆ, ಸ್ವಸ್ವರೂಪ ತಿಳುವಳಿಕೆಯನ್ನೆಲ್ಲ ಆಳವಾಗಿ ಮನಗಾಣಬೇಕಿದೆ...

□

## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ–೩೫೫ರ ಸರಿಯುತ್ತರಗಳು

೧. (ಇ) ಪ್ರೊ. ಎಸ್. ಉಮಾಪತಿ ೨. (ಅ) ಬಸವಣ್ಣನ ಕಲ್ಯಾಣ ಹುಡುಕುತ್ತ ೩.(ಆ) ಶಾಂತಾ ಇಮ್ರಾಪುರ ೪.(ಅ) ಹೇಮಗಲ್ಲ ಹಂಪ ೫.(ಈ) ಕುದುರೆಯ ಸವಾರಿ

'ಮಹಾಮನೆ'ಯ "ವಚನ ರಸಪ್ರಶ್ನೆ–೩೫"ರ ಉತ್ತರವನ್ನು ಯಾರೂ ಕಳಿಸಿಲ್ಲದ ಕಾರಣದಿಂದ ಈ ಸಂಚಿಕೆಯ ಬಹುಮಾನವನ್ನು ಯಾರಿಗೂ ಕೊಡಲಾಗಿಲ್ಲ.

### ವಚನ ರಸಪ್ರಶ್ನೆ ~ ೩೬೦ರ ಪ್ರಶ್ನೆಗಳು

**೧. ಅಭಿಸಂಧಿ ಪದದ ಅರ್ಥ:**

(ಅ) ಹೊಸತು (ಆ) ಹೊಂದಿಕೆಯಿಲ್ಲದ್ದು
(ಇ) ಮೇಳ (ಈ) ಸ್ನೇಹ

**೨. ಸೂಫಿ ಕೃತಿಯನ್ನು ಬರೆದವರು:**

(ಅ) ಡಾ. ರಹಮತ್ ತರೀಕೆರೆ (ಆ) ಡಾ. ಗುರುರಾಜ ಕರ್ಜಗಿ
(ಇ) ರಂಜಾನ್ ದರ್ಗಾ (ಈ) ನಟರಾಜ ಬೂದಾಳು

**೩. ಶ್ರೀ ಪಂಡಿತಾರಾಧ್ಯ ಸ್ವಾಮೀಜಿಯವರು ರಚಿಸಿದ ಕೃತಿಯ ಹೆಸರು:**

(ಅ) ಕಲ್ಯಾಣ (ಆ) ಮರುಕಲ್ಯಾಣ
(ಇ) ಕಲ್ಯಾಣವೆಂಬ ಪ್ರಣತಿ (ಈ) ಕಲ್ಯಾಣದೆಡೆಗೆ

**೪. ಕುಂಬೇಶ್ವರ ಲಿಂಗದಲ್ಲಿದ್ದ ಜಗನ್ನಾಥ – ಇದು ಯಾರ ಅಂಕಿತ ನಾಮ?**

(ಅ) ಹೊಡೆಹುಲ್ಲ ಬಂಕಣ್ಣ (ಆ) ಹಾವಿನಹಾಳ ಕಲ್ಲಯ್ಯ
(ಇ) ಹೆಂಡದ ಮಾರಯ್ಯ (ಈ) ಹಡಪದ ಅಪ್ಪಣ್ಣ

**೫. ಬಂಡೆಯ ಮೇಗಣ ಹೆಳವನಂತೆ – ಈ ಸಾಲು ಯಾರ ವಚನದಲ್ಲಿ ಬರುತ್ತದೆ?**

(ಅ) ಸತ್ಯಕ್ಕ (ಆ) ಸಗರದ ಬೊಮ್ಮಣ್ಣ
(ಇ) ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ (ಈ) ಸಕಲೇಶ ಮಾದರಸ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು–೫೬೦೦೭೦.





# ಅಗಣಿತ

ಡಾ. ಅಮರೇಶ ನುಗಡೋಣಿ

ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಕುದುರೆಯ
ನೇರ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ
ಇದು ಕಾರಣ ನೆರೆ ಮೂರು ಲೋಕವೆಲ್ಲವೂ ಹಲ್ಲಣವ ಹೊತ್ತುಕೊಂಡು
ತೊಳಲುತ್ತೈದಾರೆ ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರು?

– ಅಲ್ಲಮಪ್ರಭು

ಅಲ್ಲಮಪ್ರಭುವಿನ ಈ ವಚನ, ವಚನ ಓದುಗರ ಗಮನ ಸೆಳೆದಿದೆ. ಅಚ್ಚರಿ ಹುಟ್ಟಿಸುತ್ತದೆ. ಹೇಳುವುದನ್ನು ರೂಪಕದಲ್ಲಿ ಹೇಳುವುದು ಅಲ್ಲಮನ ಗುಣ. ಈ ವಚನದಲ್ಲಿ ಕಿರಿದಾದ ಕತೆ – ಕಥನದ ಅಂಶವಿದೆ. ಮನ ಕಲ್ಪಿಸಿಕೊಂಡರೆ ಚಿತ್ರ ಮೂಡುತ್ತದೆ. ಬರಿ ಚಿತ್ರವಲ್ಲ ಚಲನೆಯಿರುವ ಚಿತ್ರ ಮೂಡುತ್ತದೆ. ಒಂದು ಅರ್ಥ ಹೇಳಿದರೆ ಈ ವಚನಕ್ಕೆ ನ್ಯಾಯ ಸಿಗುವುದಿಲ್ಲ. ಮನುಷ್ಯ ಬದುಕಿನಲ್ಲಿ ವೈಫಲ್ಯ ಕಂಡಾಗಲೆಲ್ಲ ನೆನಪಾಗುವುದು ಈ ವಚನ. ವ್ಯಕ್ತಿಗತ ನೋವಿನ ಸಂದರ್ಭದಲ್ಲಿ ಮಾತ್ರವಲ್ಲ, ವ್ಯಕ್ತಿಗಳು ಸೋತದ್ದನ್ನು, ವೈಫಲ್ಯಗೊಂಡದ್ದನ್ನು ಕಂಡಾಗ ಇತರರು ಹೇಳುತ್ತಾರೆ. 'ಕೊಟ್ಟ ಕುದುರೆಯನ್ನು ಏರಲಾಗದವನು' ಎಂದು ಸಂದರ್ಭಕ್ಕೆ ತಕ್ಕಂತೆ ಹೇಳುವ ಮಾತಿದು.

ವ್ಯಕ್ತಿಗಳು ಒಂದು ಕೆಲಸ ಮಾಡಿ ಅದರಲ್ಲಿ ಆಸಕ್ತಿ ತೋರಿಸದೆ ಇನ್ನೊಂದು ಕೆಲಸಕ್ಕೆ ಕೈ ಹಾಕುವ ಗುಣ ಹೊಂದಿರುತ್ತಾರೆ. ಒಂದು ಬಿಟ್ಟು ಇನ್ನೊಂದು ಹಿಡಿದು ಗೆಲುವು ಸಾಧಿಸುವವರೂ ಇದ್ದಾರೆ. ಅದರಲ್ಲಿ ವೈಫಲ್ಯ ಕಂಡು ಇನ್ನೊಂದರಲ್ಲಿ ಸಾಫಲ್ಯ ಕಂಡುಕೊಂಡವರೂ ಇದ್ದಾರೆ. ಹಿಡಿಯುವುದು, ಬಿಡುವುದು ಮತ್ತೊಂದನ್ನು ಅರಸುವುದು ಮಾಡುತ್ತ ಯಾವುದೋ ಒಂದರಲ್ಲಿ ಗೆದ್ದೆವು ಎನ್ನುವವರು ಹೊಟ್ಟೆ ಹೊರೆಯುವವರೇ ಹೊರತು ಸಾಧಕರಲ್ಲ.

ಇನ್ನೂ ಕೆಲವರಿರುತ್ತಾರೆ ಕವಿಯಾಗಬೇಕೆಂದು ಕವಿತೆ ಬರೆಯುವುದನ್ನು ಮಾಡುತ್ತಾರೆ.

'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ,
ಹೊಸಪೇಟೆ – ೫೮೩ ೨೦೧ ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯

ಒಳ್ಳೆಯ ಕವಿ ಎನ್ನಿಸಿಕೊಳ್ಳದಿದ್ದರೂ, ಒಳ್ಳೆಯ ಕವಿತೆ ಬರೆಯಬೇಕೆಂಬ ಇಚ್ಛಾಶಕ್ತಿಯನ್ನು ಹೊಂದುವ ಸಾಹಸ ಮಾಡದೆ ಕವಿತೆಗಳ ಮೇಲೆ ಕವಿತೆ ಬರೆಯುತ್ತಾರೆ. ಇದರಿಂದ ಏನೂ ಪ್ರಯೋಜನವಿಲ್ಲ. ಕವಿತೆ ಹೊತ್ತು ತಿರುಗುತ್ತಾರೆ. ವೈಫಲ್ಯ ಕಂಡ ಈ ಸಾಲಿನಲ್ಲಿ ಚಿತ್ರ ಕಲಾವಿದರು, ಸಂಗೀತಗಾರರು, ನಟರು ಮುಂತಾದವರನ್ನು ಹೆಸರಿಸಬಹುದು.

ವಚನ ಚಳುವಳಿಯ ತತ್ವಗಳ ಹಿನ್ನೆಲೆಯಲ್ಲಿ ನೋಡಿದಾಗ ಹೊಳೆವ ಅರ್ಥ ಬೇರೆಯದೇ ಇದೆ. ಸಾಮಾನ್ಯರು ಆ ದೇವರಿಗೆ ನಡೆದುಕೊಳ್ಳುವುದು. ಅಲ್ಲಿ ಬೇಡಿದ್ದು ಸಿಗದೇ ಹೋದರೆ ಇನ್ನೊಂದು ದೇವರನ್ನು ಆರಾಧಿಸುವುದು ಮಾಡುತ್ತ ಹತ್ತಾರು ಇಲ್ಲದ ದೇವರನ್ನು ಬೇಡುತ್ತ ಪೂಜಿಸುವುದನ್ನು ನೋಡುತ್ತೇವೆ. ವಚನಕಾರರ ದೇವರ ಕಲ್ಪನೆಯೇ ಬೇರೆ. ಮರದೊಳಗಣ, ಉದಕದೊಳಗಣ ಕಿಚ್ಚಿನಂತೆ ದೇವರ ಅಸ್ತಿತ್ವವನ್ನು ಕಲ್ಪಿಸುತ್ತಾರೆ. ಭಕ್ತಿ ಚಳುವಳಿಯಲ್ಲಿ ಜಾತಿ ಮೀರಿದ ಸಮಾಜ ಕಟ್ಟುವ ಕೆಲಸ ನಡೆಯುತ್ತದೆ. ವಚನ ಚಳುವಳಿಯಲ್ಲಿ ಲಿಂಗದೀಕ್ಷೆಯನ್ನು ಈ ಚಳುವಳಿಯ ವ್ಯಾಪ್ತಿಯೊಳಗೆ ಬಂದವರಿಗೆ ನೀಡಲಾಯಿತು. ಲಿಂಗದೀಕ್ಷೆ-ಶಿವದೀಕ್ಷೆ ಪಡೆದ ನಾನಾ ಸಮುದಾಯಗಳ ಜನರು ಲಿಂಗವನ್ನೇ ಹಿಡಿದು ಸಾಧನೆ ಮಾಡಬೇಕು. ಅಂಗವು, ಪ್ರಾಣವು ಲಿಂಗವಾಗುವವರೆಗೆ ಸಾಧನೆಯಲ್ಲಿರಬೇಕು. ಅದು ಬಿಟ್ಟು ಬೇರೊಂದು ಧರ್ಮ-ದೇವರನ್ನು ಹುಡುಕಿಕೊಂಡು ಹೋಗುವವರು ಅಲ್ಲಿಯೂ ಸಲ್ಲದೆ ಲಾಂಛನಗಳನ್ನು ಹಿಡಿದು ಹೊತ್ತು ದಣಿಯುತ್ತಾರೆಯೇ ಹೊರತು ಸವಾರಿ ಮಾಡಲರಿಯರು. ಇಂಥವರನ್ನು ಕಂಡೆ 'ಲಿಂಗಸಾಧಕರೆಲ್ಲರೂ ಭೂಬಾರಕರಾದರು' ಎಂದು ಚೆನ್ನಬಸವಣ್ಣ ಹೇಳಿರಬಹುದು. ಕೊಟ್ಟ ಕುದುರೆ ಎಂದರೆ ಹಿಡಿದ ಲಿಂಗವನ್ನು ಧ್ಯಾನಿಸಿ ಕುರುಹನ್ನು ಮೀರಿ ಅರುಹನ್ನು ಗಳಿಸಬೇಕು. ಇಲ್ಲದಿದ್ದರೆ ಹಲ್ಲಣವ(ಜೀನು) ಹೊತ್ತು ತಿರುಗುವುದಾಗುತ್ತದೆ. ಅಂದರೆ ಲಿಂಗ ಹೊತ್ತು ಪೂಜಿಸುತ್ತ ಕಾಲಕಳೆದಂತಾಗುತ್ತದೆ. ಇದರಿಂದ ಬಳಲಿಕೆ ಮಾತ್ರ ಅನುಭವಿಸುತ್ತಾರೆ.

ವಚನ ಚಳುವಳಿಯ ಸಂದರ್ಭದಲ್ಲಿ ಕೆಳವರ್ಗದ ಅನೇಕ ಸಮುದಾಯಗಳು ತಮ್ಮ ಮೂಲದಿಂದ ಮುಕ್ತಿ ಹೊಂದಿ ಮುಖ್ಯವಾಹಿನಿಗೆ ಬಂದರು. ಬದುಕಿನಲ್ಲಿ ಬದಲಾವಣೆ ಕಂಡರು. ಈ ಸಿಕ್ಕ ಬದಲಾವಣೆಯನ್ನು ಸದುಪಯೋಗಪಡಿಸಿ ಕೊಳ್ಳುವಂತಾದರೆ ದಡ ಮುಟ್ಟಿದಂತೆ. ಅತ್ತ ಮೂಲವೂ ಇಲ್ಲ, ಇತ್ತ ಸಿಕ್ಕ ಬದಲಾವಣೆಗೆ ಹೊಂದಿಕೊಳ್ಳದೇ ಹೋದರೆ ಹಿಡಿಯುವುದು ಏನನ್ನು? ಅತಂತ್ರ ಸ್ಥಿತಿಯಲ್ಲಿರುವುದು ದಣಿವಿಗೆ ಕಾರಣವಾಗುತ್ತದೆ. ಲಿಂಗಸಾಧನೆ ಸುಲಭದ್ದಲ್ಲ, ಸರಳವೂ ಅಲ್ಲ. ಶ್ರಮ – ಶ್ರದ್ಧೆ, ಕಠಿಣ ಪರಿಶ್ರಮವಿಲ್ಲದೆ ಇದ್ದರೆ ಕೊಟ್ಟ ಕುದುರೆಯನ್ನು ಪಳಗಿಸಲಾಗುವುದಿಲ್ಲ. ಕುದುರೆಯನ್ನು ಪಳಗಿಸಿದರೆ ಸವಾರಿ ಸುಲಭವಾಗಿ ಸಾಗುತ್ತದೆ.

☐





# ಅನುಭಾವದ ಅಭಿವ್ಯಕ್ತಿಯಾಗಿ ವಚನಗಳು

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ**

೧. ಅನುಭವವೆಂಬುದು ಸಂವಾದವೇ ಹೊರತು ಮೌನವಲ್ಲ

ನಾನು ಅನುಭಾವಿಯಲ್ಲ, ಅನುಭಾವದ ಬಗ್ಗೆ ಕುತೂಹಲವುಳ್ಳವನು, ಅಷ್ಟೇ. ಅನುಭಾವವು ಆಧ್ಯಾತ್ಮಿಕ ಸಾಧನೆಗೆ ಸಂಬಂಧಪಟ್ಟದ್ದು, ಯಾರು ಆ ಸಾಧನೆಯ ದಾರಿಯಲ್ಲಿ ಹೆಜ್ಜೆಹಾಕಿಲ್ಲವೋ ಅವರಿಗೆ ಅನುಭಾವದ ಬಗ್ಗೆ ಮಾತನಾಡುವ ಹಕ್ಕಿಲ್ಲ, ಇರಬಾರದು ಎಂದಾದರೆ ನಾನು ಮಾತನಾಡಲು ಸಾಧ್ಯವೇ ಇಲ್ಲ. ಅನುಭಾವವೂ ಒಂದು ಮನಸ್ಥಿತಿ, ಗ್ರಹಿಕೆಯ ಒಂದು ವಿಧಾನ, ವೈಯಕ್ತಿಕ ಅನುಭವವನ್ನು ಸಾಮಾಜಿಕವಾದ ಅರಿವಾಗಿ ಪರಿವರ್ತಿಸುವ ಭಾಷೆ ಎಂದಾದರೆ ಅದು ಸಂಸ್ಕೃತಿಯ ಬಗ್ಗೆ ಆಸಕ್ತರಾದವರು ಹೆಜ್ಜೆ ಇಡಬಹುದಾದ ಕ್ಷೇತ್ರವಾಗುತ್ತದೆ. ಆ ನಂಬಿಕೆ, ನಿಲುವುಗಳಿಂದಲೇ ಮುಂದಿನ ಮಾತುಗಳನ್ನು ಆಡುತ್ತಿದ್ದೇನೆ.

ವಚನವೆಂಬುದೊಂದು ಭಾಷೆ, ಅದನ್ನು ಅನುಭಾವ ಕುರಿತು ಹೇಳುವುದಕ್ಕೂ ವಚನಕಾರರು ಬಳಸಿಕೊಂಡಿದ್ದಾರೆ. ವಚನ ಭಾಷೆಯಲ್ಲಿ ಅನುಭಾವ ಕುರಿತು ಪ್ರಮುಖವಾಗಿ ಸಂವಾದಗಳು ನಡೆದಿದ್ದರೂ ಎಲ್ಲ ವಚನಗಳೂ ಅನುಭಾವವನ್ನು ಕುರಿತವೇ ಆಗಿರುವುದಿಲ್ಲ.

ಅನುಭಾವವೆಂದರೆ 'ಮೌನ'; ಅನುಭಾವವು ಭಾಷೆಯನ್ನು ಮೀರಿದ್ದು ಅನ್ನುವ ರೂಢಿ ಮೂಲವಾದ ನಂಬಿಕೆ ಇದೆ. ಹಾಗೆ ತಿಳಿಯುವುದು ಸೂಕ್ತವೇ? ಅನುಭಾವವನ್ನು ಧಾರ್ಮಿಕ ಅನ್ನುವ ವಲಯಕ್ಕೆ ಸೇರಿದ್ದು ಎಂದು ತಿಳಿದಿದ್ದೇವೆ; ಯಾವುದೇ ಅನುಭವಕ್ಕಿಂತ ಅನುಭಾವ ನಿಜವಾಗಲೂ ಭಿನ್ನವೇ? ಧಾರ್ಮಿಕ ಅನುಭವಕ್ಕೆ ಭಾಷೆಯನ್ನು ಹೊಂದಿಸುವ ಕೆಲಸ ನಡೆಯುತ್ತದೆಯೋ ಅಥವಾ ಭಾಷೆಯ ಬಳಕೆಯ ಮೂಲಕವೇ ಅನುಭಾವ ಮೈಗೊಳ್ಳುತ್ತದೋ? ಅನುಭಾವದ ಭಾಷೆಗೆ ವಿಶೇಷ ಲಕ್ಷಣಗಳ ಇವೆಯೇ? ಅನುಭಾವದ ಭಾಷೆಯ ಉದ್ದೇಶಗಳು ಇತರ ಬಗೆಯ ಭಾಷಾ ಬಳಕೆಗಳಿಗಿಂತ ಹೇಗೆ ಭಿನ್ನ? ಅನುಭಾವದ ಭಾಷೆಯ ಪರಿಣಾಮದ ವಿವರಣೆ ಸಾಧ್ಯವೇ? ಈ ಮುಖ್ಯ ಪ್ರಶ್ನೆಗಳನ್ನು ಚರ್ಚಿಸುವುದು ಅಗತ್ಯವೆಂದು ತಿಳಿದಿದ್ದೇನೆ.

ನಂ. ೯೯೯, ಹಿಮಾಲಯ, ೫ನೆ ಮುಖ್ಯರಸ್ತೆ, ಅರವಿಂದ ನಗರ, ಮೈಸೂರು ೫೭೦ ೦೨೩
ಮೊ: ೯೪೪೮೦೩ ೭೯೮೩೭

ಅನುಭಾವ ಮತ್ತು ಭಾಷೆಯ ಬಗ್ಗೆ ಯೋಚಿಸಲು ತೊಡಗಿದರೆ ಮೊದಲಿಗೇ ಒಂದು ವಿಪರ್ಯಾಸ ಎದುರಾಗುತ್ತದೆ. ಅನೇಕ ಅನುಭಾವಿಗಳು ಅನುಭಾವವನ್ನು ಕುರಿತು ಚಿಂತಿಸಿದವರು 'ಅನುಭಾವವೆನ್ನುವುದು ಅನಿರ್ವಚನೀಯ, ಮಾತಿನಲ್ಲಿ ವಿವರಿಸಲು ಆಗದಿರುವುದು' ಅನ್ನುವುದನ್ನು ನಾವೆಲ್ಲ ಕೇಳಿಯೇ ಇದ್ದೇವೆ. ಅನುಭಾವವು ಭಾಷೆಗೆ ಮೀರಿದ್ದು, ಆದ್ದರಿಂದ ಭಾಷಾತೀತವಾಗಿರುವುದೇ ಅನುಭಾವದ ಮುಖ್ಯ ಲಕ್ಷಣವೆಂದು ಒಪ್ಪಿಕೊಂಡು ಬಿಟ್ಟಿದ್ದೇವೆ. ಆದರೆ, ದಯವಿಟ್ಟು ಗಮನಿಸಿ 'ವಿವರಿಸಲು ಆಗುವುದಿಲ್ಲ' ಅನ್ನುವುದೂ ಒಂದು ವಿವರಣೆಯೇ ಅಲ್ಲವೇ! 'ಭಾಷೆಗೆ ಮೀರಿದ್ದು' ಅನ್ನುವುದನ್ನು ಕೂಡ ಭಾಷೆಯ ಮೂಲಕವೇ ಹೇಳಬೇಕಲ್ಲವೇ! ಆದ್ದರಿಂದಲೇ ವಿವರಿಸಲಾಗದ, ಭಾಷೆಯಾಚೆಗಿನದು ಎಂದು ಹೇಳಲಾಗುವ ಅನುಭಾವದ ಬಗ್ಗೆ ಅನುಭಾವಿಗಳೂ, ಚಿಂತಕರೂ, ವ್ಯಾಖ್ಯಾನಕಾರರೂ ಸಾವಿರಾರು ವರ್ಷಗಳಿಂದ ಮಾತಾಡುತ್ತಲೇ ಬಂದಿದ್ದಾರೆ, ಪುಸ್ತಕ ಬರೆಯುತ್ತಲೇ ಇದ್ದಾರೆ, ಭಾಷಣ ಮಾಡುತ್ತಲೇ ಇದ್ದಾರೆ. 'ಪದಗಳು ಮುಖ್ಯವಲ್ಲ ಅನ್ನಬಾರದು, ಹಾಗಂದಾಗ ನಿಮ್ಮ ಮಾತನ್ನು ನೀವೇ ಪದಗಳ ಮೂಲಕವೇ ಅಲ್ಲಗಳೆಯುತ್ತೀರಿ. ಪದಗಳು ಮುಖ್ಯವಲ್ಲದಿದ್ದರೆ ಹಾಗೆನ್ನುವ ನಿಮ್ಮ ಮಾತನ್ನು ನಾವು ಯಾಕೆ ಕೇಳಬೇಕು?' ಇದು ಪ್ರಸಿದ್ಧ ಅನುಭಾವೀ ಕವಿ ರೂಮಿಕೇಳುವ ಪ್ರಶ್ನೆ.

ನುಡಿಯೊಳಗಾಗಿ ಮೂಡಿಕೊಳ್ಳದ ಯಾವ ಸಂಗತಿಯೂ ಮನುಷ್ಯನ ಜ್ಞಾನರಾಶಿಗೆ ಸಲ್ಲುವುದಿಲ್ಲ. ನುಡಿಯಾಚಿನದು ಇದೆ ಅನ್ನುವುದಕ್ಕೂ ಇಲ್ಲ ಅನ್ನುವುದಕ್ಕೂ ಅರ್ಥವಿಲ್ಲ. ಅನುಭಾವ ಎಂಬುದು ಮುಖ್ಯವಾದ ಮನುಷ್ಯಾನುಭವಗಳಲ್ಲಿ ಒಂದು ಎನ್ನುವುದಾದರೆ ಅದು ಭಾಷೆಯ ಮೂಲಕ ವ್ಯಕ್ತವಾಗಬೇಕಾದದ್ದು ಅನಿವಾರ್ಯ. ಅನುಭಾವವು ಭಾಷೆಗೆ ಮೀರಿದ್ದು ಅನ್ನುವುದನ್ನು ತೊರೆದು ಅನುಭಾವ ಮತ್ತು ಭಾಷೆಗಳ ಸಂಬಂಧದ ಸ್ವರೂಪವನ್ನು ಪರಿಶೀಲಿಸಲು ಯತ್ನಿಸಿದರೆ ಮಾತ್ರ ಅನುಭಾವ ಮತ್ತು ಭಾಷೆ ಎಂಬ ಎರಡೂ ಸಂಗತಿಗಳ ಬಗ್ಗೆ ತಿಳಿವಳಿಕೆಯನ್ನು ಪಡೆಯಲು ಸಾಧ್ಯ.

ಹಾಗೆಯೇ ನಾವು ಪ್ರಶ್ನಿಸಿಕೊಳ್ಳಬೇಕಾದ ಇನ್ನೊಂದು ಸಂಗತಿಯೂ ಇದೆ. 'ಅನುಭಾವಿಗಳು ಮನಸ್ಸಿನಲ್ಲಿರುವುದನ್ನು ಹೇಳುವುದಿಲ್ಲ, ಅವರು ಹೇಳಿದ್ದು ಅವರ ಮನಸ್ಸಿನಲ್ಲಿ ಇರುವುದಿಲ್ಲ--'they do not say what they mean, they do not mean what they say' ಎಂಬುದು ಇನ್ನೊಂದು ಸಾಮಾನ್ಯವಾದ ತಿಳಿವಳಿಕೆ. ತಮಗೆ ಆಗಿರುವ ವಿಶೇಷವಾದ ಅನುಭವಕ್ಕೂ ಅದನ್ನು ವ್ಯಕ್ತಪಡಿಸಲು ಇರುವ ಭಾಷೆಗೂ ನಡುವೆ ದಾಟಲಾಗದ ಕಂದಕವಿದೆ ಅನ್ನುವುದು ಬಹುಶಃ ಎಲ್ಲ ಅನುಭಾವಿಗಳ ನಿಲುವು. 'ನಾನು ಹೇಳಿದ್ದೇನಾದರೆ ಹೇಳಿಲ್ಲ; ಅದು ವಿವರಣೆಗೆ ಒಗ್ಗದ್ದು' ಎನ್ನುತ್ತಾನೆ ಅನುಭಾವಿ ಎಕ್‌ಹಾರ್ಟ್. ಕನ್ನಡದಲ್ಲಿಯಾದರೋ ಅಲ್ಲಮನು 'ನುಡಿಗೆಟ್ಟ ನುಡಿ'ಯ ಬಗ್ಗೆ ಹೇಳುತ್ತಾನೆ. ನುಡಿಗೆಟ್ಟ ಎಂದರೆ ಮೌನವಾಗಿರುವ ಎಂದರ್ಥ. ತಮಂಧ ಕೆಟ್ಟರೆ ಬೆಳಕಾಗುತ್ತದೆ, ಅಸತ್ಯ ಕೆಟ್ಟರೆ





ಸತ್ಯವಾಗುತ್ತದೆ, ಹಾಗೆಯೇ ನುಡಿ ಕೆಟ್ಟರೆ ಮೌನವಾಗುತ್ತದೆ. ಮೌನವಾದ ನುಡಿ ಎಂಬುದೇ ಬಲು ದೊಡ್ಡ ವಿರೋಧಾಭಾಸ. ಭಾಷೆ ನಿಷ್ಫಲವಾದದ್ದು; ದಿನನಿತ್ಯದ ಮಾತಂತೂ ಒಗ್ಗುವುದಿಲ್ಲ; ಪವಿತ್ರವಾದ ಭಾಷೆ, ಧಾರ್ಮಿಕವಾದ ಭಾಷೆ, ಸಮೂಹದ ಆಚರಣೆಗಳ ಭಾಷೆ ಇವು ಯಾವುವೂ ತನ್ನ ವಿಶೇಷವಾದ ಅನುಭವವನ್ನು ವರ್ಣಿಸಲಾರವು, ಎಲ್ಲ ಬಗೆಯ ಭಾಷಾ ಬಳಕೆಗಳೂ ದುರ್ಬಲ, ಅಸಮರ್ಥ; ಆದರೆ ತಾನು ಪಡೆದ ಅನುಭವ ವಿಶ್ವಾತ್ಮಕವಾದದ್ದು, ಭಾಷೆಗಳ ನಿರ್ದಿಷ್ಟತೆಯನ್ನು ಮೀರಿದ್ದು ಅನ್ನುವುದೂ ಅನುಭಾವಿಗೆ ಗೊತ್ತಿರುತ್ತದೆ. ಅಂದರೆ, ಸ್ವ-ಅನುಭವವೊಂದೇ ಪ್ರಮಾಣ, ಮಿಕ್ಕೆಲ್ಲ ಭಾಷಿಕ ಪ್ರಮಾಣಗಳೂ ಅಪ್ರಮಾಣ ಅನ್ನುವ ನಿಲುವು ಅನುಭಾವಿಗಳದ್ದು ಅನ್ನಿಸುತ್ತದೆ.

ನಾನೆಂಬುದು ಪ್ರಮಾಣ
ನೀನೆಂಬುದು ಪ್ರಮಾಣ
ಸ್ವಯವೆಂಬುದು ಪ್ರಮಾಣ
ಪರವೆಂಬುದು ಪ್ರಮಾಣ
ಪ್ರಮಾಣವೆಂಬುದು ಪ್ರಮಾಣ
ಗುಹೇಶ್ವರನೆಂಬುದು ಅಪ್ರಮಾಣ [ಸಂಪುಟ೨, ವಚನ೧೨೯೨]

ನಾನು, ನೀನು, ಸ್ವಯ, ಪರ ಎಲ್ಲವೂ ಪ್ರಮಾಣಗಳು, ಅಳತೆಗೆ ಒಳಪಟ್ಟವು. ಪ್ರಮಾಣ ಎಂಬುದೂ ಅಳತೆಗೆ ಒಳಪಟ್ಟದ್ದೇ. ಗುಹೇಶ್ವರ ಅಥವಾ ಅನುಭಾವ ಯಾವ ಅಳತೆಗೂ ಒಳಪಟ್ಟದ್ದಲ್ಲ, ಮೀರಿದ್ದು. ಈಗ ಹುಟ್ಟುವ ಪ್ರಶ್ನೆಯೆಂದರೆ ಕೇವಲ ಸ್ವಪ್ರಮಾಣ ಅನ್ನುವುದನ್ನಿಟ್ಟುಕೊಂಡು ಅನುಭಾವವನ್ನೂ, ಅನುಭಾವದ ಭಾಷೆಯನ್ನೂ ಅರಿಯಲು ಸಾಧ್ಯವೇ? ಚಿಂತಕರು ಸಾಧ್ಯವಿಲ್ಲ ಎನ್ನುತ್ತಾರೆ.

ಸ್ವತಃ ವಚನಕಾರರೇ ಅನುಭಾವವು ಮೌನವಲ್ಲ, ಸಂವಾದ, ಸಮಾನ ಅನುಭಾವಿಗಳ ನಡುವೆ ನಡೆವ ಸಂವಾದ ಎಂಬ ಅರ್ಥವನ್ನೂ ಅನುಭಾವ ಎಂಬ ಪದಕ್ಕೆ ನೀಡಿದ್ದಾರೆ. ಅನುಭಾವವು ಮೌನ ಎಂಬುದನ್ನೂ ಒಪ್ಪಿದ್ದಾರೆ. ಗ್ರೀಕ್ಮೂಲದ ಮಿಸ್ಟಿಸಿಸಮ್ ಎಂಬ ಪದಕ್ಕೆ ಸಂವಾದವೆಂಬ ಅರ್ಥವಿಲ್ಲ, ಅದು ಮೌನದ ಇನ್ನೊಂದು ರೂಪು.

ಅಂಧಕನ ಕೈಯ ಅಂಧಕ ಹಿಡಿದಂತಿರಬೇಕು
ಮೂಗನಕೈಯಲ್ಲಿ ಕಾವ್ಯವಕೇಳಿದಂತಿರಬೇಕು
ದರ್ಪಣದೊಳಗಣ ಪ್ರತಿಬಿಂಬದಂತೆ ಹಿಡಿವರಿಗಳವಲ್ಲದಿರಬೇಕು
[ಸಂಪುಟ ೫, ವಚನ ೧೦೯೭]

ಎಂದು ಮುಕ್ತಾಯಕ್ಕನವರು ಹೇಳಿದರೆ
ಮರುತನ ಸಂಗದಿಂದ ಪರಿಮಳ ಬೀಸರವಾಯಿತ್ತು
ನುಡಿಯ ಗಡಣದಿಂದ ಅನುಭಾವ ಬೀಸರವಾಯಿತ್ತು

ಮಾಟದ ಸಂಭ್ರಮದಿಂದ ಭಕ್ತಿ ಬೀಸರವಾಯಿತ್ತು
ಕೂಟದ ಬೆರಕೆಯ ಸಂಭ್ರಮದಿಂದ ಅರಿವು ಬೀಸರವಾಯಿತ್ತು
ಸೂಕ್ಷ್ಮ ಶಿವಪಥವು ಸಾಮಾನ್ಯಂಗಳವೆ
ಕೂಡಲಚೆನ್ನಸಂಗನ ಶರಣರಿಗಲ್ಲದಿಲ್ಲ [ಸಂಪುಟ೩ವಚನ೧೪೫೯]

ಎಂಬ ಚನ್ನಬಸವಣ್ಣನವರ ವಚನ ಅನುಭಾವವು ಮಾತಿನ ರಾಶಿಯಲ್ಲಿ ವ್ಯರ್ಥವಾಗುತ್ತದೆ ಎನ್ನುತ್ತದೆ. ಮಾತು ಅನುಭಾವವನ್ನು ವ್ಯರ್ಥಗೊಳಿಸುವಂತೆಯೇ ಅಪರಿಮಿತವಾದ ಅನುಭವ-ಅರಿವುಗಳನ್ನು ಹೊಳೆಯಿಸುವ ಬೆಳಕೂ ಹೌದು. ಅದಕ್ಕೆಂದೇ ಅಲ್ಲಮ ಪ್ರಭುಗಳು 'ಮಾತೆಂಬುದು ಜ್ಯೋತಿರ್ಲಿಂಗ' ಅದು ಮನುಷ್ಯನ ದೇಹದ ಮೂಲಕವೇ ಪ್ರಕಟವಾಗುವುದು ಎನ್ನುತ್ತಾರೆ [ಸಂಪುಟ೨, ವಚನ ೧೪೬೩]. ನಮ್ಮ ಪ್ರಸ್ತುತ ಪರಿಶೀಲನೆ ಸಾಧ್ಯವಾಗಿರುವುದೇ ಅನುಭಾವವೆಂಬ ಮಾತಿಗೆ ವಚನಕಾರರು ಸಂವಾದವೆಂಬ ಅರ್ಥವನ್ನೂ ನೀಡಿರುವುದರಿಂದ.

ಅನುಭಾವ ಉಳ್ಳವರ ಕಂಡು
ತುರ್ಯ ಸಂಭಾಷಣೆಯ ಬೆಸಗೊಳ್ಳದಿದ್ದಡೆ
ನರಕದಲ್ಲಿಕ್ಕಯ್ಯಾ ರಾಮನಾಥ [ಸಂಪುಟ ೭, ವಚನ ೭೨೩]

ಶೂನ್ಯಸಂಪಾದನೆಯಲ್ಲಿ ಬರುವ ಅಲ್ಲಮ-ಮುಕ್ತಾಯಕ್ಕಗಳ ಸಂವಾದವೇ ಅನುಭಾವಿಯು ಮೌನವಾಗಿರಬೇಕೋ, ತನ್ನ ಅನುಭಾವವನ್ನು ಮಾತಿನಲ್ಲಿ ತಿಳಿಸಬೇಕೋ ಎಂಬ ಪ್ರಶ್ನೆಯ ಚರ್ಚೆಯೇ ಆಗಿದೆ. ಮಾತು ಜ್ಯೋತಿರ್ಲಿಂಗವೆಂಬ ಅಲ್ಲಮನ ಪ್ರತಿಪಾದನೆಯೊಂದಿಗೆ ಮಾತಿನ ಮೂಲಕ ಅನುಭಾವದ ಸಂವಾದ ಸಾಧ್ಯವೆಂಬ ನಿಲುವು ಸ್ಥಾಪಿತವಾಗುತ್ತದೆ. ಅದು ಶೂನ್ಯ ಸಂಪಾದನೆಯ ಸಂಕಲನದ ಸಮರ್ಥನೆಯೂ ಆಗುತ್ತದೆ. ಅನುಭಾವವನ್ನು ಮಾತಿನ ಮೂಲಕ ತಿಳಿಯಲಾಗದು ಎಂಬ ಮುಕ್ತಾಯಕ್ಕನವರ ನಿಲುವು ಸಮರ್ಥನೀಯವಾಗುವುದಾದರೆ ಶೂನ್ಯಸಂಪಾದನೆಯಂಥ ಕೃತಿ, ಗುರು-ಶಿಷ್ಯಸಂಬಂಧ, ಯಾವುದೂ ಸಾಧ್ಯವಾಗದು.

[ಮುಂದುವರೆಯುತ್ತದೆ]

□

ಭೂಮಿ ಘನವೆಂಬೆನೆ ಪಾದಕ್ಕೊಳಗಾಯಿತ್ತು
ಗಗನ ಘನವೆಂಬೆನೆ ಕಂಗಳಿಗೊಳಗಾಯಿತ್ತು
ಮಹವು ಘನವೆಂಬೆನೆ ಮಾತಿಂಗೊಳಗಾಯಿತ್ತು
ಘನವೆಂಬುದಿನ್ನೆಲ್ಲಿಯುದೆಲವೋ
ಅರಿವಿಂಗಾಚಾರವಿಲ್ಲ ಕುರುತಿಂಗೆ ನೆಲೆಯಿಲ್ಲ
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆನು





## ಒಂದು ವಚನ – ಎರಡು ನೋಟ

ಡಾ. ಎ.ಸಿ. ಮಂಜುಳ ಇವರು ಮೂಲತಃ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯವರಾಗಿದ್ದು, ಪ್ರಸ್ತುತ ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜಿನಲ್ಲಿ ರೇಷ್ಮೆ ಕೃಷಿ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಶೈಕ್ಷಣಿಕವಾಗಿ ಚಿನ್ನದ ಪದಕ ಮತ್ತು ರ್‍ಯಾಂಕ್‌ಗಳ ಹಿನ್ನೆಲೆ ಹೊಂದಿರುವ ಇವರಿಗೆ ಸಾಹಿತ್ಯದಲ್ಲಿ ಅಪಾರ ಆಸಕ್ತಿ ಇದೆ.

ಡಾ. ವೀಣಾ ಕಲ್ಮಠ ಅವರು ಬಸವೇಶ್ವರ ಕಲಾ ಮಹಾವಿದ್ಯಾಲಯ, ಕನ್ನಡ ಸ್ನಾತಕೋತ್ತರ ವಿಭಾಗದಲ್ಲಿ ಕನ್ನಡ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಲ್ಲಮ ಮತ್ತು ಅಕ್ಕನ ವಚನಗಳಲ್ಲಿ ಮಾಯೆ ನಿರ್ವಚನದ ನೆಲೆಗಳು ಮಹಾಪ್ರಬಂಧಕ್ಕೆ ಹಂಪಿ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ದೊರೆತಿದೆ.

ಉಂಟೆಂಬಲ್ಲಿಯೆ ಜ್ಞಾನಕ್ಕೆ ದೂರ
ಇಲ್ಲಾ ಎಂಬಲ್ಲಿಯೆ ಸಮಯಕ್ಕೆ ದೂರ
ತನುವಿಗೆ ಬಂದ ಪ್ರಾಪ್ತಿಯ ಅನುಭವಿಸುವುದಕ್ಕೆ ಒಡಲಾಯಿತು
ಪ್ರಾಪ್ತಿನನುಂಬುದು ಘಟವೋ ಆತ್ಮನೋ?
ಒಂದನಹುದು, ಒಂದನಲ್ಲಾ ಎನಬಾರದು
ಇಲ್ಲಾ ಎಂದೆಡೆ ಕ್ರೀವಂತರಿಗೆ ಭಿನ್ನ
ಅಹುದೆಂದೆಡೆ ಅರಿದಾಂತಗೆ ವಿರೋಧ
ತೆರಪಿಲ್ಲದ ಘನವ ಉಪಮಿಸಲಿಲ್ಲ
ಕಾಮಧೂಮ ಧೂಳೇಶ್ವರನ ಮುಂದೆ ಹೋಗಲಿಲ್ಲ
ಹಿಂದೆ ಉಳಿಯಲಿಲ್ಲ

– ಮಾದಾರ ಧೂಳಯ್ಯ

## ಸಮನ್ವಯದ ಹಾದಿ

### ಡಾ. ಎ.ಸಿ. ಮಂಜುಳ

ವಚನಕಾರರು ಲೌಕಿಕವನ್ನು ನಿರಾಕರಿಸಿದವರೂ ಅಲ್ಲ, ದ್ವೇಷಿಸಿದವರೂ ಅಲ್ಲ.

ಗೃಹಸ್ಥ ಧರ್ಮವನ್ನು ಇನ್ನಿಲ್ಲದ ಗೌರವದಲ್ಲಿ ಕಂಡವರು ಇವರು. ಆ ಎರಡೂ ಲೌಕಿಕ ಮತ್ತು ಭಕ್ತಿ ಎರಡೂ ಪರಸ್ಪರ ವಿರುದ್ಧ ತಿಳಿಯಲಾದ ಸಾಮಾನ್ಯ ನಂಬಿಕೆಗೆ ವಿರುದ್ಧವಾದ ಪ್ರಮೇಯವೊಂದನ್ನು ಕಟ್ಟಿದವರು ಇವರು. ಮಾದಾರ ಧೂಳಯ್ಯನ ಈ ವಚನದ ಇನೆ ಸಾಲು ತನುವಿಗೆ ಬಂದ ಪ್ರಾಪ್ತಿಯ ಅನುಭವಿಸುವುದಕ್ಕೆ ಒಡಲಾಯಿತು ದೇಹದ ಅಸ್ತಿತ್ವದ ವಾಸ್ತವವನ್ನು ಒಪ್ಪಿಕೊಳ್ಳಬೇಕು ಎನ್ನುವುದನ್ನು ಒತ್ತುಕೊಟ್ಟು ಹೇಳುತ್ತದೆ. ದೇಹ ಇರುವುದೇ ನಿಜವೆಂದಾದ ಮೇಲೆ ದೇಹ ಕೊಡಬಹುದಾದದ್ದನ್ನು ನಿರಾಕರಿಸುವುದು ಅನಗತ್ಯ ಎನ್ನುವ ಈ ಸಾಲು ಅದು ಜೀವವಿರೋಧಿಯೂ ಆಗಬಹುದು ಎನ್ನುವ ದೃಷ್ಟಿಕೋನವನ್ನು ಧ್ವನಿಸುತ್ತಿರುವಂತೆ ಕಾಣಿಸುತ್ತಿದೆ. ಇಲ್ಲಾ ಎಂದೆಡೆ ಕ್ರೀವಂತರಿಗೆ ಭಿನ್ನ ಎನ್ನುವ ಸಾಲಿನಲ್ಲಿ ನಮ್ಮ ಬದುಕಿನ ಅನುಭವಗಳಿಗೂ ದೃಷ್ಟಿಕೋನಗಳಿಗೂ ಇರುವ ಸಂಬಂಧವನ್ನು ಈ ವಚನ ಚರ್ಚಿಸುತ್ತಿದೆ.

ಒಂದನಹುದು, ಒಂದನಲ್ಲಾ ಎನಬಾರದು ಎನ್ನುವ ಮಾತಂತೂ ಕೂಡಾ ಮುಖ್ಯವಾದುದು. ಇರುವುದನ್ನು ಇಲ್ಲ ಎನ್ನಬೇಕಾದ ಅಗತ್ಯವೇನು ಎನ್ನುವ ಪ್ರಶ್ನೆ ಬಸವಣ್ಣನವರ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಎನ್ನುವ ಸಾಲು ನೆನಪಿಸುತ್ತಿದೆ. ಈ ಬದುಕು ಘನವಾದದ್ದು, ಗೌರವಕ್ಕೆ ಅರ್ಹವಾದದ್ದು. ಪ್ರೀತಿಸಲೂ ಯೋಗ್ಯವಾದದ್ದು. ಹಾಗೆಂದು ಈ ಬದುಕಿನಲ್ಲಿ ಇಹದಲ್ಲಿಯೇ ಮುಳುಗಿ ಹೋಗುವುದು ಬದುಕು ಕೇಡಬಹುದಾದದ್ದರಲ್ಲಿ ಅರ್ಥ ಮಾತ್ರ ಪಡೆದುಕೊಂಡಂತೆ. ಮಿಕ್ಕುಮೀರಿ ಹೋಗುವುದೇ ಬದುಕಿನ ಗುಣಧರ್ಮವಾಗಬೇಕು ಪು.ತಿ.ನ. ಹೇಳುವಂತೆ ಭವನಿಮಜ್ಜನ ಚಾತುರ್ಯ ಮತ್ತು ಲಘಿಯಾ ಕೌಶಲಗಳನ್ನು ಈ ವಚನ ಸೂಚಿಸುತ್ತಿರಬಹುದೆ?

ಶರಣರು ಒಟ್ಟೂ ಭಕ್ತಿ ಪರಂಪರೆಯಲ್ಲಿಯೇ ಭಿನ್ನವಾಗುವುದು ಲೌಕಿಕವನ್ನು ಕುರಿತ ಈ ಪ್ರಾಯೋಗಿಕ ಮತ್ತು ಅರ್ಥಪೂರ್ಣ ದೃಷ್ಟಿಕೋನದ ಕಾರಣಕ್ಕಾಗಿ. ಮರ್ತ್ಯವನ್ನು ಅವರು ಸಾಧನೆಯ ರಂಗವೆಂದೇ ಪರಿಗಣಿಸಿದರು. ಜೀವಕಾಮವಿರಬಹುದು, ಕಾಯಕ ಪ್ರಜ್ಞೆ ಇರಬಹುದು, ಯಶಸ್ವಿ ದಾಂಪತ್ಯವಿರಬಹುದು ಈ ಎಲ್ಲವನ್ನೂ ಅವರು ಜೀವಪರವಾಗಿಯೇ ಕಂಡವರು. ಅವುಗಳಿಂದ ಸಿಗಬಹುದಾದ ಸುಖವು ದೈವದೊಂದಿಗಿನ ಅನುಸಂಧಾನಕ್ಕಿಂತ ಕಮ್ಮಿಯೆಂದು ಅವರು ತಿಳಿದವರಲ್ಲ. ಕಾಯಕದಲ್ಲಿಯೇ ಕೈಲಾಸ ಕಾಣಲು ಹೊರಟವರಿಗೆ ಬದುಕಿನ ಸಂತೋಷಗಳನ್ನು ಧಿಕ್ಕರಿಸುವುದು ಅನಗತ್ಯವಾಗಿ ಕಂಡಿತು. ದೈವ, ಭಕ್ತಿ, ಕಾಯಕ, ಅನುಭಾವ, ಮುಕ್ತಿ ಈ ಎಲ್ಲವೂ ಒಂದಕ್ಕೊಂದು ಪೂರಕ ಎನ್ನುವ ಶರಣರ ದೃಷ್ಟಿಕೋನವು ಎಲ್ಲಕಾಲಕ್ಕೂ ಸಲ್ಲುವಂಥದ್ದು ಎಂದೇ ಭಾಸವಾಗುತ್ತದೆ. ದಿನ ಕಳೆದ ಹಾಗೂ ವಚನಕಾರರು ಪ್ರಸ್ತುತವಾಗುವುದು ಈ ಕಾರಣಕ್ಕಾಗಿಯೇ.

ನಂ. ೧೦, ೪ನೆ ಅಡ್ಡರಸ್ತೆ, ಎ' ಸೆಕ್ಟರ್, ಅಮೃತ ನಗರ ಬೆಂಗಳೂರು ೫೬೦ ೦೯೨
೮೬೧೮೩ ೧೩೧೧೫

☐





# ಲೌಕಿಕ ಮತ್ತು ಅಲೌಕಿಕಗಳ ಸಮಾಗಮ

## ಡಾ. ವೀಣಾ ಕಲ್ಮಠ

12ನೇ ಶತಮಾನದಲ್ಲಿನ ಶರಣ ಪರಂಪರೆಯ ನೇತಾರನಾದ ಬಸವಣ್ಣನವರ ಕಿರಿಯ ಸಮಕಾಲಿನ ಶರಣನೆಂದರೆ ಮಾದಾರ ಧೂಳಯ್ಯ. ಕಕ್ಕಯ್ಯ-ಮಲ್ಲಿದೇವಿಯರ ಮಗನಾದ ಧೂಳಯ್ಯ. ಸೋದರತ್ತೆಯ ಮಗಳಾದ ದಾರಕೆಯನ್ನು ವಿವಾಹವಾಗಿದ್ದು, ವರದಾನಿ ಎಂಬ ಮಗಳಿದ್ದಳು ಎಂಬ ವಿಷಯ ಚರಿತ್ರೆಯಿಂದ ತಿಳಿದು ಬರುತ್ತದೆ. ಕಾಮಧೂಮ ಧೂಳೇಶ್ವರ ಎಂಬ ಅಂಕಿತದಿಂದ 106 ವಚನಗಳನ್ನು ರಚಿಸಿದ್ದಾನೆ. ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ ಪರಮಾತ್ಮನನ್ನು ಕಂಡು 'ಇತ್ತಲೇಕೆ ಬಂದೆ' ನಿನ್ನ ಭಕ್ತರಲ್ಲಿಗೆ ಹೋಗಿ ವರ ನೀಡು ಎಂದವನು. ತನ್ನ ಚರ್ಮದ ಕಾಯಕದ ಮೂಲಕ ಆಧ್ಯಾತ್ಮಿಕ ಸಾಧನೆ ಮಾಡಿದ ನಿಷ್ಠಾವಂತ ಶರಣ ಧೂಳಯ್ಯ. ತನ್ನ ಬದುಕಿನ ಬಾಹ್ಯ ಕ್ರಿಯೆಗಳನ್ನು ಕಾಯಕಕ್ಕೆ, ಆಂತರಿಕ ಕ್ರಿಯೆಗಳನ್ನು ಅಧ್ಯಾತ್ಮಕ್ಕೆ ಸಮರ್ಪಿಸಿಕೊಂಡವನು. ಇವನು ತನ್ನ ವಚನವೊಂದರಲ್ಲಿ ಲೌಕಿಕ-ಪರಮಾರ್ಥಗಳೆರಡರ ನಡುವೆ ಜೀವಿಸುವ ಜೀವನದಲ್ಲಿ ಭಕ್ತಿ ಮತ್ತು ಜ್ಞಾನದ ಮಹತ್ವದ ಕುರಿತು ಮಾತನಾಡುತ್ತಾನೆ.

ಈ ವಚನದಲ್ಲಿ 'ಉಂಟು ಮತ್ತು ಇಲ್ಲಾ' ಎಂಬ ಪರಿಕಲ್ಪನೆಯ ಮೂಲಕ ಜೀವನದ ತಾತ್ವಿಕತೆಯನ್ನು ಪ್ರಸ್ತಾಪಿಸುತ್ತಾನೆ. ಭವಿಯಾದವನು ತಾನು ಎಲ್ಲವನ್ನು ಬಲ್ಲವನು ಎಂಬ ಭಾವದಲ್ಲಿ 'ಉಂಟು' ಎಂಬುದು ಜ್ಞಾನವನ್ನು ಪಡೆಯುವಲ್ಲಿ ಮಿತಿ ಯಾದರೆ, 'ಇಲ್ಲಾ' ಎಂಬುದು ಇರುವ ಜ್ಞಾನವನ್ನು ಸಮಯೋಚಿತವಾಗಿ ಬಳಸಿಕೊಳ್ಳುವಲ್ಲಿ ವಿಫಲನಾಗುತ್ತಾನೆ. ಲೌಕಿಕದಲ್ಲಿನ ಭವಿಗೆ 'ತನು' ಮುಖ್ಯವಾಗಿ ಕರ್ಮಫಲ ಪ್ರಾಪ್ತಿಯನ್ನು ಒಪ್ಪಿಕೊಳ್ಳುವನು. ಶರಣತ್ವ ಸಾಧನೆಯತ್ತ ಮುಖ ಮಾಡದವನಿಗೆ ದೇಹ-ಆತ್ಮಗಳ ಭಿನ್ನತೆ-ಅಭಿನ್ನತೆಯ ಅರಿವು ಮೂಡದು. ಸಕ್ಕರೆ ಹಾಗೂ ಅದರ ಸವಿಯ ಅನುಭವದಂತೆ ಉಪಮಿಸಲು ಬಾರದು. ಹಾಗೆ ದೇಹ-ಆತ್ಮದ ಸಂಬಂಧವೂ ಕೂಡಾ 'ತೆರಪಿಲ್ಲದ ಘನ'ವೆಂಬುದು ಜೀವದೊಳಗೆ ಇರುವ ಅಗಾಧ ಚಿಚ್ಛಕ್ತಿ. ಅದನ್ನು ಭೇದಿಸಿ ವಿವರಿಸಲಾಗದು. ಅದೇ ಧೂಳೇಶ್ವರ ರೂಪಿ ಚೈತನ್ಯ ಶಕ್ತಿ. ಈ ಚೈತನ್ಯ ಶಕ್ತಿಯನ್ನು ಶರಣನು ಅರಿತು ಅನುಭವಿಸಿ ಜೀವಿಸಬೇಕು ಎಂಬ ಸದಾಶಯ ಇಲ್ಲಿದೆ. ಭವಿ ಶರಣನಾಗುವ ಪ್ರಕ್ರಿಯೆಯಲ್ಲಿ "ಎರಡು ಎರಡಾಗಿ ಎರಡಳಿದು ಒಂದಾಗಿ' ಎಂಬಲ್ಲಿ ಭಕ್ತ-ಭಗವಂತ ಎರಡನ್ನು ಏಕತ್ರಗೊಳಿಸಿದ್ದಾನೆ.

ಇಡಿಯಾಗಿ ದೇಹ-ಆತ್ಮಗಳ ನಿಜ ಸ್ವರೂಪ-ಸಂಬಂಧವನ್ನು ಇಲ್ಲಿ ಅಡಕಗೊಳಿಸಿ ಹೇಳಲಾಗಿದೆ. ಜೀವವೆಂಬುದು ಕಾಯದ ಮೂಲಕ ಲೌಕಿಕದ ಕ್ರಿಯಾವರ್ತನೆಗಳಲ್ಲಿ ಕಾರ್ಯಶೀಲಗೊಂಡು ಆಧ್ಯಾತ್ಮಿಕ ಉನ್ನತಿಯತ್ತ ಮುಖ ಮಾಡುತ್ತದೆ. ಆಧ್ಯಾತ್ಮಿಕ ಸಾಧನೆಯ ಈ ನಿರಂತರ ಪ್ರಕ್ರಿಯೆಯಲ್ಲಿ ಮನುಜ ಅರಿತೂ ಅರಿಯದವನಂತೆ ಅರಿವುಳ್ಳವನಾಗಿ ಜೀವಿಸಬೇಕೆಂಬ ಭಾವವಿದೇ. ☐

ಕನ್ನಡ ಸ್ನಾತಕೋತ್ತರ ವಿಭಾಗ, ಬಸವೇಶ್ವರ ಕಲಾ ಮಹಾವಿದ್ಯಾಲಯ, ಬಾಗಲಕೋಟ
ನಂ: ೯೦೦೮೯೦೧೨೬೪

# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಡಾ. ಬಸವರಾಜ ಡೋಣೂರು**

ಡಾ. ಬಸವರಾಜ ಡೋಣೂರು ಅವರು ಕನ್ನಡದ ಭರವಸೆಯ ಕಾದಂಬರಿಕಾರ, ಕವಿ ಹಾಗೂ ವಿಮರ್ಶಕರು. ಪ್ರಸ್ತುತ ಇವರು ಗುಲ್ಬರ್ಗ ಕೇಂದ್ರೀಯ ವಿಶ್ವವಿದ್ಯಾಲಯದ ಕುಲಸಚಿವರಾಗಿ ಕಾರ್ಯನಿರ್ವಹಿಸು ತ್ತಿದ್ದಾರೆ. 'ಉರಿವ ಕೆಂಡದ ಮೇಲೆ' ಇವರ ಇತ್ತೀಚಿನ ಮಹತ್ತ್ವದ ಕಾದಂಬರಿಯಾಗಿದೆ. ನೋಟ–ನಿಲುವು ಶೀರ್ಷಿಕೆಯಲ್ಲಿ ಇವರ ವಿಮರ್ಶಾ ಸಂಕಲನಗಳು ಪ್ರಕಟವಾಗಿವೆ. ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲಿಯೂ ಪಿಹೆಚ್.ಡಿ. ಮಾಡಿರುವ ಹೆಗ್ಗಳಿಕೆ ಇವರದು.

೧. ಶರಣ ಚಳುವಳಿಯನ್ನು ಆರಾಧನಾ ನೆಲೆಯಿಂದ ನೋಡುತ್ತಿರುವುದೇ ಅದರ ಪ್ರಾಯೋಗಿಕ ನೆಲೆಗಳ ಅಳವಡಿಕೆಗಿರುವ ತೊಡಕು ಎನಬಹುದೆ?

ಉತ್ತರ: ಇದು ಕೇವಲ ಶರಣ ಚಳುವಳಿಯ ಸಮಸ್ಯೆಯಲ್ಲ. ಇದು ಪ್ರತಿಯೊಂದು ಸಮಾಜೋ–ಧಾರ್ಮಿಕ ಚಳುವಳಿಯ ಸಮಸ್ಯೆಯೂ ಆಗಿದೆ. ಶರಣ ಚಳುವಳಿಯ ಸಾಮಾಜಿಕ ಸ್ವರೂಪದ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಆದರೆ ಬಹುತೇಕ ಅಧ್ಯಯನಗಳು ಅಪೂರ್ಣವಾಗಿವೆ. ಏಕೆಂದರೆ ಸಂಶೋಧಕರ ವೈಯಕ್ತಿಕ ಪೂರ್ವಾಗ್ರಹಗಳ ಮಿತಿಯೇ ಅವರ ಅಧ್ಯಯನದ ಮಿತಿಯೂ ಆಗಿರುತ್ತದೆ. ಶರಣ ಚಳುವಳಿಯನ್ನು ಆರಾಧನಾ ನೆಲೆಯಿಂದ ನೋಡುವ ಪರಿಪಾಠ ಹರಿಹರ–ರಾಘವಾಂಕರಿಂದಲೇ ಪ್ರಾರಂಭಗೊಂಡಿದೆ. ನಮ್ಮ ಕಾಲದ ಅನೇಕ ವಿದ್ವಾಂಸರೂ ಆರಾಧನಾ ನೆಲೆಯಿಂದಲೇ ಶರಣ ಚಳುವಳಿಯನ್ನು ನೋಡುತ್ತ ಬಂದಿದ್ದಾರೆ. ನಮಗೆ ಇಷ್ಟವಾದವರ ಪ್ರತಿ ನಮ್ಮಲ್ಲಿ ಆರಾಧನಾ ಮನೋಭಾವ ಹುಟ್ಟುವುದು ಸಹಜ. ಆದರೆ ಈ ಮನೋಭಾವ ನಮ್ಮ ಇಷ್ಟದ ವ್ಯಕ್ತಿ ಅಥವಾ ಚಳುವಳಿಯ ಮೂಲಸ್ವರೂಪ ಮತ್ತು ಆಶಯಕ್ಕೆ ಧಕ್ಕೆ ತರಬಾರದು. ಈ ದೃಷ್ಟಿಯಿಂದ ಶರಣ ಚಳುವಳಿಯ ಆಶಯಗಳನ್ನು ವಾಸ್ತವೀಕರಿಸಲು, ಅನುಷ್ಠಾನಗೊಳಿಸಲು, ಆರಾಧನಾ ನೆಲೆಯ ಗ್ರಹಿಕೆಗಳು ತೊಡಕು ಉಂಟು ಮಾಡಿವೆ. ಒಂದು ಜನಪರ ಲೋಕ ಜ್ಞಾನ, ಒಂದು ನಾಡು– ನುಡಿಯ ಪರ ಚಿಂತನಾಧಾರೆ ಮತ್ತು ಒಂದು ಮಾನವೀಯವಾದ ಬದುಕಿನ ಕ್ರಮ ಆರಾಧನಾ ನೆಲೆಯ ಗ್ರಹಿಕೆಗೆ ಸಿಗುವ ಸಾಧ್ಯತೆಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಡೀನ್ ಮತ್ತು ಕುಲಸಚಿವರು, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ
ಕಲಬುರ್ಗಿ – ೫೮೫ ೩೬೫ ೯೮೪೫೬ ೩೪೩೦೯



೨. ಅಕ್ಕಮಹಾದೇವಿಯನ್ನು ಜಿ.ಎಸ್.ಎಸ್. ವಚನ ಚಳುವಳಿಯಲ್ಲೊಂದು ಭಿನ್ನ ಸ್ವರ ಎಂದು ಗುರುತಿಸುತ್ತಾರೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯ?

ಉತ್ತರ: ವಚನ ಚಳುವಳಿಯಲ್ಲಿ ಅಕ್ಕಮಹಾದೇವಿ ಒಂದು ಭಿನ್ನ ಸ್ವರ ಆಗಿದ್ದಳು ಎಂದು ಜಿ.ಎಸ್.ಎಸ್. ಅವರು ಹೇಳಿದ್ದು ಸರಿಯಾಗಿದೆ. ಆದರೆ, ಜಿ.ಎಸ್.ಎಸ್. ಗುರುತಿಸಿದಂತೆ ಯಾವ ಅರ್ಥದಲ್ಲಿ ಅಕ್ಕನ ಧ್ವನಿ ಭಿನ್ನವಾಗಿದೆ ಎಂದು ನನಗೆ ಗೊತ್ತಿಲ್ಲ.

ಬಸವಣ್ಣ ಭಕ್ತಿಯ ಸಾಗರದಲ್ಲಿ ತೇಲಿ ಹೋದರೆ, ಅಲ್ಲಮ ಮೋಕ್ಷದ ಮಹಲು ಏರಿ ಕುಳಿತ, ಸಿದ್ಧರಾಮ ಕರ್ಮಯೋಗದಲ್ಲಿ ಮುಳುಗಿದ. ಇವರ ಮಧ್ಯೆ ಅಕ್ಕಮಹಾದೇವಿ ಉತ್ಕಟ ಪ್ರೀತಿಯನ್ನು ಅರಸಿ ಹೋದಳು. ಪ್ರಪಂಚದಲ್ಲಿ ಅಕ್ಕನಷ್ಟು ಉತ್ಕಟ ಪ್ರೇಮಕಾವ್ಯ ಬೇರಾವ ಕವಯತ್ರಿಯೂ ಬರೆದಿಲ್ಲ ಎನಿಸುತ್ತದೆ. ಅಕ್ಕನ ಪ್ರೀತಿಯ ಸ್ವರೂಪ ಕೂಡ ಬಹಳ ಭಿನ್ನವಾದುದು. She had a very rare sense of the feeling of love, it was excitingly intense, amazingly fresh and astonishingly original.

ಪ್ರೇಮದ ಗ್ರಹಿಕೆ, ಧಾರಣ ಮತ್ತು ಅಭಿವ್ಯಕ್ತಿಯಲ್ಲಿ ಅಕ್ಕನ ಧ್ವನಿ, ಸ್ವರ ಭಿನ್ನವಾಗಿತ್ತು ಎಂಬುದು ನನ್ನ ವೈಯಕ್ತಿಕ ಅನಿಸಿಕೆ.

೩. ಇತ್ತೀಚೆಗೆ ವಚನ ಚಳುವಳಿಯ ಆಶಯಗಳೆಂದು ನಂಬಿರುವುದನ್ನು ಪ್ರಶ್ನಿಸುವ ಪ್ರಯತ್ನಗಳು ನಡೆಯುತ್ತಿವೆ. ಈ ಪ್ರಯತ್ನಗಳು ನಿರರ್ಥಕವಾದರೂ ಈ ಬಗೆಯ ಬೆಳವಣಿಗೆಗಳು ಪ್ರತಿನಿಧಿಸುತ್ತಿರುವ ಬೆಳವಣಿಗೆಗಳ ಬಗ್ಗೆ ನಿಮ್ಮ ನಿಲುವು?

ಉತ್ತರ: ವಚನ ಚಳುವಳಿಯ ಆಶಯವನ್ನು ತಳ್ಳಿ ಹಾಕುವುದರ ಹಿಂದೆ ಯಾವ ಹುನ್ನಾರವಿದೆಯೋ? ಆದರೆ ಇಂಥ ಪ್ರಯತ್ನಗಳು ಸಫಲವಾಗುವುದಿಲ್ಲ. ಬಂಗಾರವನ್ನು ಬಹಳ ದಿನ ಮಣ್ಣಿನಲ್ಲಿ ಹೂತಿಡಲು ಸಾಧ್ಯವಿಲ್ಲ. ಅದು ಬೆಳಕಿಗೆ ಬಂದೇ ಬರುತ್ತದೆ. ವಚನ ಸಾಹಿತ್ಯ ಯಾವುದೇ ಒಂದು ಜಾತಿ ಅಥವಾ ಧರ್ಮದ ವಿರುದ್ಧ ನಡೆದ ಬಂಡಾಯವಲ್ಲ. ಅದು ಅನಾಚಾರದ ವಿರುದ್ಧ ಮತ್ತು ಶಿಷ್ಟಾಚಾರದ ಪರವಾದ ಚಳುವಳಿ. ಅದು ಮಾನವೀಯಪರವಾದ, ಜೀವಪರವಾದ ಮತ್ತು ಜನಪರವಾದ ಸಾಹಿತ್ಯಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಳುವಳಿಯಾಗಿತ್ತು. ಭಾರತೀಯ ಪರಂಪರೆಯಲ್ಲಿ ಉದ್ದಕ್ಕೂ ಬೆಳೆದು ಬಂದ ಸಮ ಸಮಾಜದ ಕಲ್ಪನೆಗೆ ಮೂರ್ತರೂಪ ಕೊಡಲು ನಡೆದ ಚಳುವಳಿ ವಚನ ಚಳುವಳಿಯಾಗಿತ್ತು. ವಚನ ಚಳುವಳಿಯ ಆಶಯಗಳನ್ನು ತಳ್ಳಿ ಹಾಕುವ ಪ್ರಯತ್ನಗಳ ಬಗ್ಗೆ ಆತಂಕಪಡುವ ಅಗತ್ಯವಿಲ್ಲ. ತನ್ನ ಆಶಯ, ಕಾಳಜಿಯನ್ನು ಸಮರ್ಥಿಸಿಕೊಳ್ಳುವ ಸಾಮರ್ಥ್ಯ ವಚನಗಳಲ್ಲಿ ಇರುವುದರಿಂದ ಅದು ಅನೇಕ ಬೌದ್ಧಿಕ ಪ್ರತಿರೋಧಗಳನ್ನು ಎದುರಿಸಿ ಗಟ್ಟಿಯಾಗಿ ನಿಂತಿದೆ ಎಂದರೆ ಈ ಚಳುವಳಿಗೆ ರಾಷ್ಟ್ರೀಯ ಮಾನ್ಯತೆ ಇದೆ ಎಂದೇ ಅರ್ಥ. ಒಂದು ಕೃತಿ, ಒಂದು ಸಾಹಿತ್ಯಕ– ಸಾಂಸ್ಕೃತಿಕ ಚಿಂತನಾಕ್ರಮ ತನ್ನ ಆಶಯಗಳನ್ನು ಕಾಪಾಡಿಕೊಂಡು ಬರುವ ಸಾಮರ್ಥ್ಯ ಪಡೆದುಕೊಂಡಿರದಿದ್ದರೆ ಅದನ್ನು

ಬೇರೆ ಯಾರೂ ರಕ್ಷಿಸಲು ಸಾಧ್ಯವಿಲ್ಲ. It should have its own innate strength to defend itself against all kinds of assault and attacks.

೪. ಶರಣ ಚಳುವಳಿಯ ಮುಕ್ತತೆಯೇ ಕಳೆದು ಹೋಗಿ, ಅದನ್ನು ಸಂಸ್ಥೀಕರಿಸುವ ಪ್ರಯತ್ನಗಳೇ ಮುಂಚೂಣಿಗೆ ಬಂದಿವೆ ಎನ್ನುವ ಅಭಿಪ್ರಾಯವನ್ನು ನೀವು ಒಪ್ಪುತ್ತೀರಾ?
ಉತ್ತರ: ಶರಣ ಸಂಸ್ಕೃತಿಯನ್ನು ಸಂಸ್ಥೀಕರಿಸುವ ಪ್ರಯತ್ನ ಮುಂಚೂಣಿಗೆ ಬಂದಿವೆ ಎಂಬ ಮಾತನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ನಮ್ಮ ಕಾಲದ ಹಿರಿಯ ವಿದ್ವಾಂಸರೇ ಇಂಥ ಪ್ರಯತ್ನಗಳನ್ನು ದೊಡ್ಡ ಮಟ್ಟದಲ್ಲಿ ಮಾಡಿದರು. ಬಸವಣ್ಣ ಒಂದು ಜೀವನ ಸಿದ್ಧಾಂತವನ್ನು, ಒಂದು ಮಾನವೀಯವಾದ ಆಚರಣೆಯನ್ನು ಹುಟ್ಟು ಹಾಕುವ ಪ್ರಯತ್ನ ಮಾಡಿದನೆ ವಿನಾ ಒಂದು ಸುಸಂಘಟಿತವಾದ ಧರ್ಮವನ್ನು ಹುಟ್ಟು ಹಾಕುವ ಪ್ರಯತ್ನ ಮಾಡಲಿಲ್ಲ. ಅವನ ಗುರು, ಲಿಂಗ ಜಂಗಮ ಕಲ್ಪನೆಗಳಾಗಲಿ, ಅವನ ಕಾಯಕ– ದಾಸೋಹ ಕಲ್ಪನೆಯಾಗಲಿ ಅದನ್ನು ಒಂದು ಮತಿಯ ನೆಲೆಯಿಂದ ನೋಡಬಾರದು. ಆರ್ಥಿಕ ಮತ್ತು ರಾಜಕೀಯ ಲಾಭಕ್ಕಾಗಿ ಕೆಲವರು ವಚನ ಚಳುವಳಿಯನ್ನು ಸಂಸ್ಥೀಕಗೊಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ಶರಣರ ವಚನಗಳನ್ನು ಆಧಾರವಾಗಿಟ್ಟುಕೊಂಡು ಒಂದು ಬಹುದೊಡ್ಡ ಮಾನವೀಯವಾದ ಚಿಂತನಾಕ್ರಮ ಹುಟ್ಟು ಹಾಕಬೇಕು. ಅದನ್ನು ಸಂಸ್ಥೀಕರಿಸುವ ಪ್ರಯತ್ನಗಳಿಂದ ಶರಣ ಚಳುವಳಿಗೆ ಬಹುದೊಡ್ಡ ಹಿನ್ನಡೆ ಉಂಟಾಗುವ ಅಪಾಯವಿದೆ. ಶರಣರು ಬಯಲು ಆಲಯ ಮಾಡಿದವರು, ದೇಹವೇ ದೇಗುಲ ಮಾಡಿದವರು, ಅವರು ಕಟ್ಟಿದ ಮಹಾಮನೆಯಲ್ಲಿ ಮತ್ತು ಅವರು ನಿರ್ಮಿಸಿದ ಅನುಭವಮಂಟಪದಲ್ಲಿ ಎಲ್ಲರಿಗೂ ಮುಕ್ತ ಪ್ರವೇಶವಿತ್ತು. ಅವರ ವಚನಗಳಲ್ಲಿ ಪ್ರಜಾಸತ್ತಾತ್ಮಕತೆ ಇತ್ತು. ಇಂಥ ಚಳುವಳಿ ಸಂಸ್ಥೀಕರಣಗೊಂಡಾಗ ಇದರ ಬಾಗಿಲುಗಳು ಕೆಲವರಿಗೆ ತೆರೆದುಕೊಂಡು ಹಲವರಿಗೆ ಮುಚ್ಚಿ ಬಿಡುತ್ತವೆ. It was an all inclusive movement, the doors of which were open to all. If it is institutionalized its doors will be shut to many sections which will defeat the very purpose for which this movement was born.

ಮುಕ್ತತೆ ವಚನ ಚಳುವಳಿಯ ಪ್ರಮುಖ ಆಶಯ ಮತ್ತು ಕಾಳಜಿಯಾಗಿತ್ತು. ಶರಣರ ಗ್ರಹಿಕೆ ಮತ್ತು ಅಭಿವ್ಯಕ್ತಿಯಲ್ಲಿ ಮುಕ್ತತೆ ಕಾಣುತ್ತದೆ. ಮುಕ್ತತೆ ಯಾವುದೇ ಒಂದು ಆರೋಗ್ಯಪೂರ್ಣ ಸಮಾಜದ ಲಕ್ಷಣ. ಈ ಅರ್ಥದಲ್ಲಿ ವಚನ ಚಳುವಳಿ ಆರೋಗ್ಯಪೂರ್ಣ ಚಳುವಳಿಯಾಗಿತ್ತು. ನೈತಿಕತೆಗೂ ಮತ್ತು ಮುಕ್ತತೆಗೂ ನೇರವಾದ ಸಂಬಂಧವಿದೆ. ನೈತಿಕವಾಗಿ ಗಟ್ಟಿಯಾಗಿರುವ ಮನುಷ್ಯ ಮುಕ್ತವಾಗಿರುತ್ತಾನೆ. ನೈತಿಕವಾಗಿ ಅಶಕ್ತನಾಗಿರುವ ಮನುಷ್ಯ ಗುಪ್ತವಾಗಿರುತ್ತಾನೆ. ವಚನಕಾರರು ಎಲ್ಲ ಅರ್ಥದಲ್ಲೂ ಮುಕ್ತವಾಗಿದ್ದರು.





೫. ಶರಣ ಚಳುವಳಿಯನ್ನು ಪ್ರಜಾಪ್ರಭುತ್ವದ ಮೊತ್ತ ಮೊದಲ ಆವೃತ್ತಿ ಎಂದು ಗುರುತಿಸುವುದರ ಬಗ್ಗೆ.
ಉತ್ತರ: ವಚನ ಚಳುವಳಿ ಪ್ರಜಾಪ್ರಭುತ್ವದ ಮೊತ್ತ ಮೊದಲ ಅವೃತ್ತಿಯಾಗಿದೆ. ವಚನಗಳೇ ಸಂವಿಧಾನ ಮತ್ತು ಅನುಭವ ಮಂಟಪವೇ ಸಂಸತ್ತು. ಮೊದಲ ಸಂಸತ್ತನ್ನು ಮತ್ತು ಮೊದಲ ಸಂವಿಧಾನವನ್ನು ನೀಡಿದ ಶ್ರೇಯಸ್ಸು ವಚನ ಚಳುವಳಿಗೆ ಸಲ್ಲಬೇಕು. ಪ್ರಜಾಪ್ರಭುತ್ವದ ಎಲ್ಲಾ ಆಶಯಗಳನ್ನು ವಚನಕಾರರು ಮೈಗೂಡಿಸಿಕೊಂಡಿದ್ದರು. ಅವರು ಸಂವಿಧಾನವನ್ನು ಬರೆದು ಗ್ಲಾಸ್ ಫ್ರೇಮಿನಲ್ಲಿಡಲಿಲ್ಲ, ಅದನ್ನು ಅನುಷ್ಠಾನಕ್ಕೆ ತಂದರು. ಚರ್ಚೆ, ಸಂವಾದ ಮತ್ತು ಮತಬೇಧ ಪ್ರಜಾಸತ್ತಾತ್ಮಕ ಸಮಾಜದ ಲಕ್ಷಣ. ವಚನಕಾರರು ಇವುಗಳನ್ನು ಗರಿಷ್ಠ ಮಟ್ಟದಲ್ಲಿ ಸಾಧಿಸಿದ್ದರು. ಮೇಲು– ಕೀಳು, ಬಡವ – ಬಲ್ಲಿದ ಎಂಬ ಬೇಧಗಳನ್ನು ಅಳಿದು ಹಾಕಿ ಎಲ್ಲರೂ ಸಮಾನರು ಎಂದು ಶರಣರು ಬೋಧಿಸಿದರು. ಭಾರತೀಯ ಹೆಚ್ಚು ಕಡಿಮೆ ಎಲ್ಲಾ ಜಾತಿಗಳು ಒಂದೇ ಛತ್ರದ ಅಡಿಯಲ್ಲಿ ಕುಳಿತು, ಚರ್ಚೆ, ಸಂವಾದ ನಡೆಸಿ, ಉಂಡು–ತಿಂದು ವೈವಾಹಿಕ ಸಂಬಂಧ ಬೆಳೆಸಿದ ಸಂದರ್ಭ ವಚನ ಚಳುವಳಿಯ ಕಾಲದಲ್ಲಿ ಕಂಡಷ್ಟು ಬೇರಾವ ಸಂದರ್ಭದಲ್ಲೂ ಕಂಡಿಲ್ಲ.

೬. ದಲಿತ ಸಂಕಥನಕ್ಕೆ ಶರಣ ಚಳುವಳಿಯ ಕೊಡುಗೆಗಳು:
ಉತ್ತರ: ದಲಿತ ಸಂಕಥನಕ್ಕೆ ಶರಣ ಚಳುವಳಿಯ ಕೊಡುಗೆಗಳು ಅಪಾರ. ವಚನ ಚಳುವಳಿ ನಿಜವಾದ ಅರ್ಥದಲ್ಲಿ ದಲಿತ ಚಳುವಳಿಯಾಗಿದೆ. ವಚನ ಚಳುವಳಿ ದಲಿತ ಚಳುವಳಿಗೆ ತಾತ್ವಿಕ ಭುನಾದಿ ಒದಗಿಸಿದೆ. ದಲಿತ ಸಾಹಿತ್ಯದ ಆಶಯ, ತಾತ್ವಿಕತೆ, ಭಾಷೆ ಮತ್ತು ದಾರ್ಶನಿಕತೆ ಒದಗಿ ಬಂದದ್ದೇ ವಚನ ಚಳುವಳಿಯಿಂದ. ಅಂಬೇಡ್ಕರರು ಆಡಿದ ಅನೇಕ ಮಾತುಗಳು ವಚಗಳಲ್ಲಿವೆ. ಆಧುನಿಕ ವಿದ್ವಾಂಸರ ಮೂಲಭೂತ ಆಶಯ ಮತ್ತು ಅವರ ಸಮಸಮಾಜಪರ ಚಿಂತನೆಗಳು ವಚನ ಚಳುವಳಿಯಲ್ಲಿ, ವಚನಗಳಲ್ಲಿ ಬಹಳ ಢಾಳಾಗಿ ಕಾಣಿಸಿಕೊಂಡಿವೆ.

೭. ನಿಮಗೆ ಬಹುಪ್ರಿಯರಾದ ವಚನಕಾರರು ಯಾರು? ಕಾರಣಗಳು?
ಉತ್ತರ: ಬಸವಣ್ಣ, ಅಲ್ಲಮ ಮತ್ತು ಅಕ್ಕಮಹಾದೇವಿ ನನಗೆ ಪ್ರಿಯರಾದ ವಚನಕಾರರು. ಬಸವಣ್ಣನ ಪ್ರಾಮಾಣಿಕ ಅಭಿವ್ಯಕ್ತಿ, ಅವನ ಪ್ರಕರ ನೈತಿಕತೆ, ಪ್ರಾಂಜಲ ಮನಸ್ಸು ಮತ್ತು ಜೀವನಪ್ರೀತಿಯ ಕಾರಣದಿಂದಾಗಿ ಬಸವಣ್ಣ ನನಗೆ ಪ್ರಿಯವಾಗುತ್ತಾನೆ.

ಅಲ್ಲಮನ ಆಧ್ಯಾತ್ಮಿಕತೆ, ಅವನ ಅದ್ಭುತ ಕಲ್ಪಕಶಕ್ತಿ, ಅವನ ವಿಶಿಷ್ಟ ನುಡಿಗಟ್ಟು, ಅವನ ರೂಪಕನಿಷ್ಠ ಭಾಷೆ, ನಿರ್ಬಿಡೆಯ ನಿಲುವು ಮತ್ತು ಅವನ ನೇರ, ದಿಟ್ಟ ಮತ್ತು ಗಟ್ಟಿಯಾದ ಆಧ್ಯಾತ್ಮಿಕ ವಿಚಾರಧಾರೆ ಅಲ್ಲಮನನ್ನು ಇಷ್ಟಪಡಲು ಕಾರಣ.

ಅಕ್ಕ ಮಹಾದೇವಿಯ ವಚನಗಳ ಕಾವ್ಯಾತ್ಮಕತೆ ನನಗೆ ಬಹಳ ಅಪ್ಯಾಯಮಾನವಾಗಿ ಕಾಣಿಸುತ್ತದೆ. She is the most poetic of all vachanakaras. She is extremely

forceful and powerful in her vachanas. ಪ್ರೀತಿಯಾಗಲಿ, ಭಕ್ತಿಯಾಗಲಿ ಅಥವಾ ವೈರಾಗ್ಯವೇ ಆಗಲಿ ಪ್ರತಿಯೊಂದೂ ಅಕ್ಕನ ವಚನಗಳಲ್ಲಿ ಉತ್ಕಟವಾಗಿ ವ್ಯಕ್ತಗೊಂಡಿದೆ. ಈ ಕಾರಣಕ್ಕಾಗಿ ಅಕ್ಕ ನನಗೆ ಬಹಳ ಪ್ರಿಯಳಾಗಿ ಕಾಣುತ್ತಾಳೆ.

೮. ಗಂಡು ಹೆಣ್ಣಿನ ಸಂಬಂಧದ ಬಗೆಗಿನ ವಚನಕಾರರ ನಿಲುವುಗಳನ್ನು ಕುರಿತು ನಿಮ್ಮ ಗ್ರಹಿಕೆಗಳು?

ಉತ್ತರ: ಗಂಡು ಹೆಣ್ಣಿನ ಸಂಬಂಧದ ಬಗ್ಗೆ ವಚನಕಾರರ ನಿಲುವು ಬಹಳ ಸ್ಪಷ್ಟವಾಗಿತ್ತು. ಗಂಡು ಹೆಣ್ಣಿನಲ್ಲಿ ಅವರು ಬೇಧ ಎಣಿಸಲಿಲ್ಲ. ನಮ್ಮ ಕಾಲದ ಯಾವುದೇ ಪ್ರಕಾಂಡ ಮಹಿಳಾವಾದಿಗಿಂತಲೂ ಕಡಿಮೆ ಇಲ್ಲದ ರೀತಿಯಲ್ಲಿ ಅವರು ಲಿಂಗ ಸಮಾನತೆಯ ಬಗ್ಗೆ ಮಾತನಾಡಿದರು. ಜೈವಿಕ ಭಿನ್ನತೆಯನ್ನು ಕೂಡ ಅವರು ತಳ್ಳಿ ಹಾಕಿದರು. ದೇಹದ ಆಧರದ ಮೇಲೆ ಲಿಂಗ ನಿರ್ಧರಿಸುವುದನ್ನು ಅವರು ವಿರೋಧಿಸಿದರು. ಗಂಡು ಹೆಣ್ಣಿನ ನಡುವೆ ಬೇಧ ಕಲ್ಪಿಸದೆ ಅವರ ನಡುವಿನ ಸಮಾನತೆಯನ್ನು ಆಶ್ಚರ್ಯಕರ ರೀತಿಯಲ್ಲಿ ಅವರು ಎತ್ತಿ ಹಿಡಿದರು.

೯. ಶರಣ ಚಳುವಳಿಯ ಮೂಲ ವ್ಯಕ್ತಿ ವಿಶಿಷ್ಟ ಸಿದ್ಧಾಂತವಾಗಿರಬಹುದೆ?

ಉತ್ತರ : ವಚನ ಚಳುವಳಿಯ ಮೂಲ ವ್ಯಕ್ತಿ ವಿಶಿಷ್ಟ ಸಿದ್ಧಾಂತವಾಗಿತ್ತು ಎಂಬುದರಲ್ಲಿ ಸಂದೇಹವೇ ಇಲ್ಲ. ವ್ಯಕ್ತಿಯ ಬೌದ್ಧಿಕ, ಆಧ್ಯಾತ್ಮಿಕ, ಭೌತಿಕ ಅಭಿವೃದ್ಧಿಗೆ ವಚನ ಚಳುವಳಿ ವಿಶೇಷ ಒತ್ತು ನೀಡಿತು. ವ್ಯಕ್ತಿಯ ಮೂಲಭೂತ ಬೇಡಿಕೆಗಳನ್ನು, ಶಾರೀರಿಕ ಮತ್ತು ಮಾನಸಿಕ ಅಪೇಕ್ಷಗಳನ್ನು, ಬೇಕು- ಬೇಡಗಳನ್ನು ಅವರು ತಳ್ಳಿ ಹಾಕಲಿಲ್ಲ. ಆಧ್ಯಾತ್ಮಿಕ, ಪಾರಮಾರ್ಥಿಕ ವಿಷಯಗಳ ಬೆಂಬತ್ತಿದ್ದರೂ ಸಾಂಸಾರಿಕ ಮತ್ತು ಭೋಗಿಕ ಜೀವನವನ್ನು ಅವರು ತ್ಯಜಿಸಲಿಲ್ಲ. ಆದರೆ ಸಂಸಾರದಲ್ಲಿ ಇದ್ದರೂ ಇರದಂತೆ ಬದುಕಿದರು. ಇಹ-ಪರಗಳ ನಡುವಿನ ಭೇದ ಅಳಿದು, ಅಂತರಂಗ -ಬಹಿರಂಗದ ಶುದ್ಧಿಗೆ ಪ್ರಾಶಸ್ತ್ಯ ನೀಡಿ ಜೀವ-ಪರಮಾತ್ಮನ ನಡುವಿನ ಭೇದ ಇಲ್ಲದಾಗಿಸಿ ವ್ಯಕ್ತಿ ವಿಶಿಷ್ಟ ಸಿದ್ಧಾಂತದ ಪರವಾಗಿ ನಿಂತು ಬದುಕು ಕಟ್ಟಿಕೊಂಡು, ಸಂಸಾರ ಸಾಗರದಲ್ಲಿದ್ದುಕೊಂಡು ಪಾರಮಾರ್ಥಿಕ ಸುಖ ಅನುಭವಿಸಿದರು. □

**ಕಾಳಿಯ ಕಂಕಾಳದಿಂದ ಮುನ್ನ**
**ತ್ರಿಪುರಸಂಹಾರದಿಂದ ಮಉನ್ನ**
**ಹರಿ ವಿರಿಂಚಿಗಳಿಂದ ಮುನ್ನ**
**ಉಮೆಯ ಕಲ್ಯಾಣದಿಂದ ಮುನ್ನ**
**ಮುನ್ನ ಮುನ್ನ ಮುನ್ನ**
**ಅಂದಿಂಗೆಳೆಯ ನೀನು ಹಳೆಯ ನಾನು**
**ಮಹಾದಾನಿ ಕೂಡಲಸಂಗಮದೇವಾ**





# ವಚನ-ವೈಚಾರಿಕತೆ-ವೈಜ್ಞಾನಿಕ ಮನೋಭಾವ

**ಸುಮಂಗಲಾ ಎಸ್. ಮುಮ್ಮಿಗಟ್ಟಿ**

"ನಾನು ಯಾರು?" ಈ ಪ್ರಶ್ನೆ ಬಹುಕಾಲದಿಂದ ವಿಜ್ಞಾನಿಗಳನ್ನೂ, ಜ್ಞಾನಿಗಳನ್ನೂ, ಸಂತರನ್ನೂ, ಸಿದ್ಧರನ್ನೂ ಕಾಡುತ್ತಿರುವ ಪ್ರಶ್ನೆ. ಕೆಲವರು ಅದನ್ನು "ಅರಿವು" ಎಂದರೆ ಮತ್ತೆ ಕೆಲವರು "ಜ್ಞಾನ" ಎಂದರು. ಇನ್ನೂ ಹಲವರು "ಸತ್ಯ" ಎಂದರು. ವಿಜ್ಞಾನಿಗಳು ಅದು "ಡಿ.ಎನ್, ಎ" ಅಂದರೆ ಡಿ ಆಕ್ಸಿರೈಬೋಸ್ ನ್ಯೂಕ್ಲಿಯಿಕ್ ಆಸಿಡ್ ಎಂಬ ಮೂಲ ರಾಸಾಯನಿಕ ಎನ್ನುವುದನ್ನು ಒಪ್ಪಿಕೊಂಡರು. ಅದು ದೇಹದ ಎಲ್ಲ ಭೌತಿಕ ಮತ್ತು ರಾಸಾಯನಿಕ ರಚನೆಗಳನ್ನು ನಿರ್ಧರಿಸುವುದರಿಂದ ಅದುವೇ ಜೀವಿಯ ಮೂಲ ಎಂದರು. ಆದರೆ ಇದುವರೆಗೆ ಸಂಪೂರ್ಣವಾಗಿ ಸಮಾಧಾನವನ್ನು ಕೊಡುವ ಉತ್ತರ ಯಾರಿಗೂ ಇನ್ನೂ ದೊರೆತಿಲ್ಲ ಎನ್ನುವುದೇ ಸೋಜಿಗದ ವಿಷಯ. ಈ ಸಹಸ್ರಾರು ಜೀವಕೋಶಗಳಿಂದಾದ ಕಾಯಕ್ಕೆ "ಜೀವ" ಎನ್ನುವುದು ಬರುವುದು ಎಲ್ಲಿಂದ? ಅದು ಹೋದೊಡನೆ ಇದು ಮತ್ತೆ ಬರಿಯ ಮಾಂಸ ಮುಜ್ಜೆಗಳ ದೇಹ ಮಾತ್ರವಾಗಿ ಉಳಿಯುವುದಲ್ಲವೇ? ಅದು ಹೋಗುವುದು ಎಲ್ಲಿಗೆ? ಇಂತಹ ಹಲವು ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನ ಮನುಕುಲದಲ್ಲಿ ನಿರಂತರವಾಗಿ ಸಾಗಿ ಬಂದಿದೆ. ಬ್ರಿಟನ್ನಿನ ಮನಶಾಸ್ತ್ರಜ್ಞ ಸ್ಟುವರ್ಟ್ ಬರೆಯುತ್ತಾರೆ: "ನಿಜಕ್ಕೂ ಅರಿವು ಎನ್ನುವುದು ಒಂದು ಅತ್ಯಾಕರ್ಷಕ, ಆದರೆ ಗ್ರಹಿಕೆಗೆ ನಿಲುಕದ ವಿದ್ಯಮಾನ" ಎಂದು. ಈ ಪ್ರಯತ್ನಕ್ಕೆ ತಮ್ಮ "ಅರಿವಿನ" ಬಹುದೊಡ್ಡ ಕೊಡುಗೆಯನ್ನು ಕೊಟ್ಟವರು ಶರಣರು.

ತನ್ನ ತಾನರಿವುದನ್ನು ಶರಣರು ಅರಿವು ಎಂದು ಕರೆಯುವುದನ್ನು ನಾವು ಹಲವರ ವಚನಗಳಲ್ಲಿ ಕಾಣುತ್ತೇವೆ. ಚಿನ್ಮಯಜ್ಞಾನಿ ಚೆನ್ನಬಸವಣ್ಣ

ಅರಿವರತು ಮರುಹು ದಿಟ ವಾದವರನೇನೆಂಬೆ ?
ಅರಿವನರಿಯದೆ ಮರೆವ ನೆರೆ ಸಂಸಾರಿಗಳನೇನೆಂಬೆ ?
ಅಂಗವಿಕಾರದ ಹಂಗಿನೊಳಗಿದ್ದು
ಕೂಡಲಚೆನ್ನಸಂಗಾ ಎಂಬವರನೇನೆಂಬೆ? ಎಂದರೆ,

ನಂ. 302/25, ಜೇನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್,
1ನೇ ಹಂತ, ಬೆಂಗಳೂರು - 560 086 94810 35983

ಅರಿವನಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು.

ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು.

ನಾನೆಂತು ಬದುಕುವೆನಣ್ಣಾ? – ಶರಣೆ ಮುಕ್ತಾಯಕ್ಕ

ಈ ಅರಿವನ್ನು ಅಗಿದಗಿದು ಅರಿಯದೆ ಕೆಟ್ಟಿದೆ ಮರ್ತ್ಯಲೋಕ ಎನ್ನುತ್ತಾಳೆ.

ಮಡಿವಾಳ ಮಾಚಿದೇವರು ಅರಿದೆನೆಂಬುದೇ ಮರೆವಿಂಗೆ ಬೀಜ ಎನ್ನುವುದನ್ನು ನೋಡಬಹುದು.

ಅರುಹಿನೊಳಗಣ ಕುರುಹು ಮರಹಿಂಗೆ ಬೀಜ.

ಕುರುಹಿನ ಮರಹನರಿವು ನುಂಗಿ,

ಘನಕ್ಕೆ ಘನವೇದ್ಯವಾದ ಬಳಿಕ, ನಿತ್ಯಪರಿಪೂರ್ಣ ತಾನೆ.

ಕಲಿದೇವರದೇವ ವಾಙ್ಮನಕ್ಕಗೋಚರನು.

ಅಲ್ಲಮ ಪ್ರಭುಗಳು ಇದನ್ನು ತಮ್ಮ ವಚನಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿಸುವುದನ್ನು ನಾವು ಕಾಣಬಹುದು.

ಅರಿದೆವರಿದೆವೆಂಬಿರಿ ಅರಿದ ಪರಿಯೆಂತು ಹೇಳಿರೆ ?

ಅರಿದವರು ಅರಿದೆವೆಂಬರೆ ?

ಅರಿಯಬಾರದ ಘನವನರಿದು,

ಅರಿಯದಂತಿಪ್ಪರು ಗುಹೇಶ್ವರಾ

ತನ್ನ ತಾನರಿದವರು ಅರಿದೆವು ಎನ್ನುವುದಿಲ್ಲ ಅರಿತದ್ದೇ ಆದರೆ ಅರಿತ ಪರಿಯನ್ನು ಹೇಳಿರಿ? ಎಂದು ಸವಾಲೊಡ್ಡುವ ಅಲ್ಲಮ ತನ್ನ ಮತ್ತೊಂದು ವಚನದಲ್ಲಿ–

ತನ್ನರಿದವಂಗೆ ಇದಿರೆಂಬುದಿಲ್ಲ, ತನ್ನರಿಯದವಂಗೆ ಇದಿರೆಂಬುದುಂಟು.

ಅರುಹು ಮರಹು ಕುರುಹಳಿಯಿತ್ತು, ಬೆರಗಾಯಿತ್ತು.

ಬೆರಗು ಬೆರಗಿನೊಳಗೆ ಕರಿಗೊಂಡಿತ್ತು ಇದೇನೊ?

ಭ್ರಾಂತು ಭ್ರಾಂತನೆ ನುಂಗಿ

ಗುಹೇಶ್ವರ ಭವಿಯ ಬೆಂಬತ್ತಿ ಭವಿಯಾದ ಕಾರಣ

ಎನ್ನುತ್ತಾನೆ. ಇಲ್ಲಿ ತನ್ನನ್ನು ತಾನರಿಯುವುದೇ ನಿಜದ ಅರಿವು. ಇಲ್ಲಿ ತಾನು ಎನ್ನುವುದು ಕಾಯವಲ್ಲ. ಅದೊಂದು ನಿಸ್ಸೀಮ ಸತ್ಯ. ಅದನ್ನು ಅರಿತವನಿಗೆ ತನಗಿಂತ ಭಿನ್ನವಾಗಿ ಯಾವುದೂ ಕಾಣುವುದಿಲ್ಲ ಆದುದರಿಂದ ಅವನಿಗೆ ಇದಿರೆಂಬುದು ಇಲ್ಲವೇ ಇಲ್ಲ. ಎಲ್ಲವೂ ತಾನೇ ಆಗಿರುವಾಗ ಅರಿವು–ಮರೆವು–ಕುರುಹು ಎನ್ನುವುದು ಅಳಿದು ಹೋಗಿದೆ. ತಾನೇ ಅನಂತ ಅಸ್ತಿತ್ವದ ರೂಪವಾಗಿದ್ದಾನೆ. ಇದೊಂದು ಬೆರಗಿನ ಸ್ಥಿತಿ, ಇದು ಮಹಾಬೆರಗಿನೊಳಗೆ ಒಂದಾಗಿ ಹೋಗಿದೆ. ಭಿನ್ನತೆಯ ಭ್ರಾಂತಿ ಅಳಿದು ಹೋಗಿ ಕುರುಹುಗೆಟ್ಟಿದ್ದಾನೆ, ಇಲ್ಲಿ ಅಲ್ಲಮನ ಮತ್ತೊಂದು ವಚನವನ್ನು ನಾವು ಪರಾಮರ್ಶಿಸಿದರೆ,





ಆದಿ ಆಧಾರವಿಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು

ಸುರಾಳನಿರಾಳವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು,

ಗುಹೇಶ್ವರಾ ನಿಮ್ಮ ಶರಣನುದಯಿಸಿದನಂದು.

ವಿಶ್ವದ ಉಗಮದೊಂದಿಗೇ ಕಾಲದ ಗಣನೆ ಪ್ರಾರಂಭವಾಯಿತು. ಇದರ ಅಭಿವ್ಯಕ್ತಿಗೆ ಕಾರಣವಾದ ಮೂಲ ತತ್ವವೇ ಆಧಾರ. ಆಗ ಅಂದರೆ ಪ್ರಥಮದಲ್ಲಿ ಪಸರಿಸುತ್ತಾ ಹೋದ ಅಹಂ ಪ್ರಜ್ಞೆಯೇ ಹಮ್ಮು ಆನಂತರ ಕಾಣ ಬಂದದ್ದೇ, ಹಮ್ಮು, ಇಂದ್ರಿಯಗಳಿಗೆ ಗೋಚರವಾಗುವ ಭೌತಿಕ ಗುಣಗಳಿಂದಾದ ಸಗುಣ ಪ್ರಪಂಚವೇ ಸುರಾಳ. ಹಾಗೆ ಅರಿವಿಗೆ ನಿಲುಕುದ ಬಹು ಸೂಕ್ಷ್ಮವಾದ ತತ್ವವೇ ನಿರಾಳ. ಸೃಷ್ಟಿಗತವಾದ ಜೀವ ಚೈತನ್ಯವೇ ಶೂನ್ಯ. ಸಮಷ್ಟಿಗತವಾದ ಶಿವಚೈತನ್ಯವೇ ನಿಶೂನ್ಯ. ಜೀವಸಂಕುಲಗಳಿರುವ ಪ್ರಪಂಚ ಸಚರವಾದರೆ, ಜಡವಾದ ವಸ್ತುಗಳಿಂದಾದ ಭೌತಪ್ರಪಂಚವು ಅಚರ. ಇದ್ಯಾವುದೂ ಅಲ್ಲದ ಪರಮ ಮೂಲವಸ್ತುವೇ ಪರತತ್ವ. ಅದು ಕಾಲ, ದೇಶ, ವಸ್ತು, ಅವಸ್ಥೆ ಮತ್ತು ಸಂಬಂಧಗಳಿಗೆ ಅತೀತವಾದುದು. ಅದನ್ನು ವಿಧಿ ಶಬ್ದಗಳಿಂದ ವರ್ಣಿಸಲು ಸಾಧ್ಯವಿಲ್ಲ. ಆದುದರಿಂದಲೇ ಶರಣರು ಅದನ್ನು ಪರಮ ಶೂನ್ಯ ಎಂದು ಸಂಕೇತಿಸಿದರು. ಈ ಶೂನ್ಯ ತತ್ವದ ಸಂಕಲ್ಪದಿಂದ ಮೂಡಿರುವುದೇ ಪರಶಿವತತ್ವ. ಅದರ ಅಭಿವ್ಯಕ್ತಿಯೇ "ಜೀವಚೈತನ್ಯ" ಇದುವೇ ಅಸಂಖ್ಯ ಜೀವಗಳಲ್ಲಿ ಚೈತನ್ಯರೂಪವಾಗಿದೆ.

ಇದಕ್ಕೂ ಮೊದಲಿನ ಮತ್ತು ಈ ಮೇಲಿನ ಅಲ್ಲಮನ ವಚನವನ್ನು ಸಮೀಕರಿಸಿ ನೋಡಿದಾಗ ಇಡಿಯ ವಿಶ್ವದ ಉಗಮಕ್ಕೆ ಕಾರಣವಾಗಿರುವ ಆ ಮೂಲತತ್ವವೇ ಜೀವಚೈತನ್ಯಕ್ಕೂ ಕಾರಣವಾಗಿದೆ ಎನ್ನುತ್ತಾರೆ ಶರಣರು.

ವಿಜ್ಞಾನ ಜಗತ್ತು ವಿಶ್ವದ ಉಗಮದಲ್ಲಿ ಕಂಡುಬಂದ ಮೂಲಕಣದ ಮೂಲಕಣದ ಹುಡುಕಾಟದಲ್ಲಿ ತೊಡಗಿರುವುದು ನಮಗೆಲ್ಲಾ ತಿಳಿದಿರುವ ವಿಷಯ.

ಲಾರ್ಜ್ ಹ್ಯಾಡ್ರಾನ್ ಕೊಲೈಡರ್ (ಎಲ್‌ಎಚ್‌ಸಿ) ಪ್ರಪಂಚದ ಅತ್ಯಂತ ಬೃಹತ್ ಹಾಗು ಅತ್ಯಂತ ಶಕ್ತಿಯುತ ಉಪಪರಮಾಣು ಕಣಗಳನ್ನು ತ್ವರಿತಗೊಳಿಸುವ ಉಪಕರಣಗಳ ಪ್ರಯೋಗಶಾಲೆಯಾಗಿದೆ. ಯುರೋಪಿನ ಅಣು ಸಂಶೋಧನೆ ಸಂಸ್ಥೆ (CERN) ಮುಂದಾಳತ್ವದಲ್ಲಿ ಇದನ್ನು ಜಿನೀವದ ಬಳಿ ಸ್ವಿಟ್ಜರ್‌ಲ್ಯಾಂಡ್ ಮತ್ತು ಫ್ರಾನ್ಸ್ ದೇಶಗಳ ಗಡಿಯ ನೆಲದಡಿ ನಿರ್ಮಿಸಲಾಗಿದೆ. ಸುಮಾರು ೮೫ ದೇಶಗಳ ಭೌತಶಾಸ್ತ್ರಜ್ಞರು ಇದರಲ್ಲಿ ಭಾಗಿಯಾಗಿದ್ದಾರೆ ಇದನ್ನು ಪ್ರೋಟಾನ್ ಕಣಗಳನ್ನು ಸರಿಸುಮಾರು ಬೆಳಕಿನ ವೇಗಕ್ಕೆ ತ್ವರಿತಗೊಳಿಸಿ ಅವುಗಳನ್ನು ಅಪ್ಪಳಿಸಲು ನಿರ್ಮಿಸಲಾಗಿದೆ.

೧೯೩೧ರಲ್ಲಿ ಬ್ರಿಟಿಷ್ ಭೌತಶಾಸ್ತ್ರಜ್ಞಪಾಲ್ ಡೈರಕ್ ಎಂಬುವನು ಮೊದಲ ಬಾರಿಗೆ ಈ ಸಿದ್ಧಾಂತವೊಂದನ್ನು ರೂಪಿಸಿದ. ಅದರಂತೆ ಒಂದು ಶಕ್ತಿಯು ವಸ್ತುವಾಗಿ ಪರಿವರ್ತನೆಗೊಂಡಾಗ ಅದರಲ್ಲಿ ಉತ್ಪಾದನೆಯಾಗುವುದು: ಒಂದು ಕಣ ಮತ್ತು ಆ ಕಣದ

ಕನ್ನಡಿ ಬಿಂಬ. ಈ ಕಣದ ಕನ್ನಡಿ ಬಿಂಬವನ್ನು ಪ್ರತಿ-ಕಣ ಎಂದು ಕರೆಯಲಾಗುತ್ತದೆ. ಈ ಪ್ರತಿ-ಕಣವು ವಿರುದ್ಧ ವಿದ್ಯುತ್ ಋಣವನ್ನು ಹೊಂದಿರುತ್ತದೆ. ನಮಗೆ ತಿಳಿದಿರುವಂತೆ ವಸ್ತುವೊಂದರ ಅತೀ ಸೂಕ್ಷ್ಮಕಣವಾದ ಪರಮಾಣುವೊಂದರಲ್ಲಿ ಮೂಲತ: ಒಂದು ಪ್ರೋಟಾನ್ ಮತ್ತು ನ್ಯೂಟ್ರಾನು ಇದ್ದು ಇವೆರಡರ ಸುತ್ತಲೂ ಇಲೆಕ್ಟ್ರಾನುಗಳು ಸುತ್ತು ಹಾಕುತ್ತಿರುತ್ತವೆ. ಇಲೆಕ್ಟ್ರಾನ್ ಪ್ರತಿವಸ್ತುವನ್ನು ಅಂದರೆ ಕನ್ನಡಿ ಬಿಂಬವನ್ನು ಪಾಸಿಟ್ರಾನ್ ಎಂದು ಕರೆಯುತ್ತಾರೆ. ಅದೇ ರೀತಿ ಪ್ರೋಟಾನ್-ಪ್ರತಿ ಪ್ರೋಟಾನ್, ಜಲಜನಕ-ಪ್ರತಿ ಜಲಜನಕ, ಇತ್ಯಾದಿ. ಕಣ ಮತ್ತು ಅದರ ಕನ್ನಡಿ ಬಿಂಬವಾದ ಪ್ರತಿ-ಕಣವು ಒಂದಕ್ಕೊಂದು ಡಿಕ್ಕಿ ಹೊಡೆದಾಗ ಅವುಗಳಿಂದ ಹೆಚ್ಚಿನ ಶಕ್ತಿ ಬಿಡುಗಡೆ ಹೊಂದಿ ಅವು ನಾಶಗೊಳ್ಳುತ್ತವೆ.

ವಿಶ್ವ ಸೃಷ್ಟಿಯ ರಹಸ್ಯದ ಶೋಧನೆ: ಭೌತಶಾಸ್ತ್ರದ ಪರಮಾಣುಗಳ ಸ್ವರೂಪವನ್ನು ಅಧ್ಯಯನ ನಡೆಸುತ್ತಿರುವ ವಿಜ್ಞಾನಿಗಳಿಗೆ ರಹಸ್ಯವಾಗಿಯೇ ಉಳಿದಿರುವ ವಿಷಯವೆಂದರೆ ವಿಶ್ವದಲ್ಲಿ ವಸ್ತು ಇರುವಂತೆಯೇ ಅದರ ಪ್ರತಿ-ವಸ್ತುಗಳು ಅಸ್ತಿತ್ವದಲ್ಲಿವೆಯೇ ಎಂಬುದು. ಅವು ಅಸ್ತಿತ್ವದಲ್ಲಿದ್ದರೆ ಎಲ್ಲಿವೆ? ಅವುಗಳನ್ನು ಪ್ರಯೋಗಗಳ ಮೂಲಕ ಅಸ್ತಿತ್ವಕ್ಕೆ ತರಬಹುದೇ? ಅವುಗಳನ್ನು ಅಸ್ತಿತ್ವಕ್ಕೆ ತಂದ ಮೇಲೆ ಅವುಗಳ ಸ್ವಭಾವ ಏನು ಇತ್ಯಾದಿ ಕುರಿತು ಹಲವು ಪ್ರಯೋಗಗಳು ನಡೆಯುತ್ತಲೇ ಇವೆ. ಇದುವರೆಗೂ ಪ್ರಯೋಗಗಳ ಮೂಲಕ ಜಲಜನಕ ಎಂಬ ಮೂಲವಸ್ತುವಿನ ಪ್ರತಿ-ಪರಮಾಣುವನ್ನು ಉತ್ಪಾದಿಸಲಾಗಿತ್ತು. ಆದರೆ ಅದನ್ನು ಉತ್ಪಾದಿಸಿದ ಸೆಕೆಂಡಿನ ಲಕ್ಷದ ಒಂದು ಕಾಲ ಮಾತ್ರ! ಅದು ವಸ್ತುವಿನ ಜೊತೆ ಡಿಕ್ಕಿ ಹೊಡೆದು ನಾಶಗೊಳ್ಳುತ್ತಿತ್ತು! ಇದರಿಂದ ಅದನ್ನು ಅಳೆಯುವುದಾಗಲಿ ಅಥವಾ ಅದರ ರಚನೆಯನ್ನು ಅಧ್ಯಯನ ಮಾಡುವುದಾಗಲಿ ಅಸಾಧ್ಯವಾಗಿತ್ತು. .ಆದರೆ, ಯೂರೋಪ್ ಪರಮಾಣು ಸಂಶೋಧನಾ ಸಂಸ್ಥೆಯು ನಡೆಸುತ್ತಿರುವ ಹಲವಾರು ಪ್ರಯೋಗಗಳಲ್ಲಿ ಸಾವಿರಾರು ಪ್ರತಿ-ಜಲಜನಕ ಅಣುಗಳನ್ನು ತಯಾರಿಸಿದೆಯಾದರೂ ಅವುಗಳಲ್ಲಿ ಕೇವಲ ೩೮ ಪ್ರತಿ-ಜಲಜನಕ ಅಣುಗಳನ್ನು ಮಾತ್ರವೇ ಹಿಡಿದಿಡಲು ಅದೂ ಕೂಡ ಸೆಕೆಂಡಿನ ಹತ್ತನೇ ಒಂದು ಕಾಲ ಮಾತ್ರ ಹಿಡಿದಿಟ್ಟು ಅಧ್ಯಯನ ಮಾಡಲು ಸಾಧ್ಯವಾಗಿದೆ. ಅರಿತಿರುವುದು ಅತ್ಯಲ್ಪ ಎಂದರೆ ತೀರಾ, ತೀರಾ ಕಡಿಮೆ. ಅದು ಪೂರ್ತಿಯಾಗಿ ತಿಳಿಯುವುದೋ ಇಲ್ಲವೋ ಗೊತ್ತಿಲ್ಲ. ಆದರೆ ಅದನ್ನು ತಪ್ಪಾಗಿ "ದೇವಕಣ" ಎಂದೂ ಕರೆದಿರುವುದು ವಿಪರ್ಯಾಸ.

ಒಟ್ಟಿನಲ್ಲಿ "ತಮ್ಮ ಹಾದಿಯ ತಾವರಿಯದವರು ತಾವಿನ್ನಾರಿಗೆ ಹಾದಿ ತೋರುವರಯ್ಯಾ?" ಎಂಬ ಶರಣರ ಪ್ರಶ್ನೆಗೆ ಉತ್ತರವಿನ್ನೂ ದೊರೆತಿಲ್ಲ. ಅಥವಾ ಅವರ ವಚನಗಳನ್ನು ಪೂರ್ತಿಯಾಗಿ ಅರ್ಥೈಸುವುದು ಇನ್ನೂ ಸಾಧ್ಯವಾಗಿಲ್ಲ.

□





# ಕ್ಷೇತ್ರ ವಾರ್ತೆಗಳು




ಮೈಸೂರು ಗ್ರಾಮಾಂತರ: ಶ್ರೀ ರಾಮಭಾರತಂ ಮತ್ತು ಯುಗದ ಜಂಗಮ ಕೃತಿಗಳ ಲೋಕಾರ್ಪಣೆ ಸಮಾರಂಭ ದಿನಾಂಕ: ೧೯.೧೨.೨೦೨೧ ಸಾನ್ನಿಧ್ಯ: ಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಚಿತ್ರದಲ್ಲಿ: ಎಂ. ಚಂದ್ರಶೇಖರ್, ಪ್ರೊ. ಸಿ. ನಾಗಣ್ಣ, ಎನ್.ಎಂ. ಗಿರಿಜಾಪತಿ, ಡಾ. ಕಬ್ಬಿನಾಲೆ ವಸಂತ ಭಾರದ್ವಾಜ್, ಡಾ. ವಿಜಯಕುಮಾರಿ, ಎಸ್. ಕರಿಕಲ್, ಡಾ. ಹೆಳವರಹುಂಡಿ ಸಿದ್ದಪ್ಪ.



ಶಿವಮೊಗ್ಗ: ಹುಣಸಘಟ್ಟ ಎಚ್.ಎಂ. ಮಲ್ಲಿಕಾರ್ಜುನಪ್ಪ ಸಮಾಜಸೇವಾ ಪ್ರತಿಷ್ಠಾನ ದತ್ತಿ ಉಪನ್ಯಾಸ, ದಿನಾಂಕ: ೧೧.೧೨.೨೦೨೧ ಚಿತ್ರದಲ್ಲಿ: ಪ್ರೊ. ಕಿರಣ್ ದೇಸಾಯಿ, ಶ್ರೀಕಾಂತ್, ಎನ್.ಹೆಚ್. ಗಾಯತ್ರಿ ಪಾಟೀಲ್, ಡಾ. ಹಾಲಮ್ಮ ಎಂ., ಹೆಚ್.ಎನ್. ಮಹಾರುದ್ರ, ವೇದಮೂರ್ತಿ, ಮಂಗಳ ಮಲ್ಲಪ್ಪ



ಇಂಡಿ: ಲಿಂ ಜಾನನಗೌಡ ಕಲ್ಲನಗೌಡ ಪಾಟೀಲ ಲಿಂ. ಅಣ್ಣಪ್ಪ ಭೀಮಣ್ಣ ಕಂಬಾರ ದತ್ತಿ ಉಪನ್ಯಾಸ. ದಿನಾಂಕ ೧೧.೧೨.೨೦೨೧

ಚಿತ್ರದಲ್ಲಿ: ಶಾರದಾ ಗಿರಣಿ, ಸೋನಾಬಾಯಿ ಕಂಬಾರ, ಗಂಗಾ ಗಲಗಲಿ, ಶಕುಂತಲ ಕುಡಗಿ, ಶಿವಾನಂದ, ವಾಲಿಕಾರ, ಬಿ.ಎಸ್ ಪಾಟೀಲ, ಆರ್.ವಿ. ಪಾಟೀಲ




ಅರಕಲಗೂಡು : ವಚನ ಕಂಠ ಪಾಠ ಸ್ಪರ್ಧೆ
ದಿನಾಂಕ:೧೮-೧೨-೨೦೨೧ ಚಿತ್ರದಲ್ಲಿ: ಎಂ.ಎನ್. ಕುಮಾರಸ್ವಾಮಿ, ವಿ.ಎಚ್. ರವಿ, ಲೋಕೇಶ್, ಶಿವರಾಜ್, ಚಂದ್ರಕಲಾ, ಉಮಾದೇವಿ, ಕಾವೇರಿ, ಮಂಜುಳ



ಶಿಕಾರಿಪುರ : ಹಂಚಿನಮನೆ ಲಿಂ. ಪಾರ್ವತಮ್ಮ ಮತ್ತು ಲಿಂ. ಗುರುಬಸಪ್ಪ ದತ್ತಿ
ದಿನಾಂಕ:೧೯.೧೧.೨೦೨೧, ಚಿತ್ರದಲ್ಲಿ: ನಾಗರಾಜನಾಯ್ಕ, ಸುಭಾಷ್‌ಚಂದ್ರ ಸ್ಥಾನಿಕ್, ಶಿವಾನಂದಪ್ಪ, ಎನ್. ಕರಿಬಸಪ್ಪ



ತುಮಕೂರು ಜಿಲ್ಲಾ ಕದಳಿ ಮಹಿಳಾ ವೇದಿಕೆ: ಲಿಂ. ಸಾವಂದಮ್ಮ ಲಿಂ ಪುಟ್ಟಬಸವಯ್ಯನವರ ಸಂಸ್ಮರಣಾ ದತ್ತಿ ಉಪನ್ಯಾಸ , ದಿನಾಂಕ:೨೦.೧೧.೨೧ ಉಪನ್ಯಾಸ: ಡಾ. ಜಲಜಾಕ್ಷಿ ಸಿ.,
ಚಿತ್ರದಲ್ಲಿ : ಲೋಕೇಶ್ವರಿ ಪ್ರಭು, ನಾಗರತ್ನ ಚಂದ್ರಪ್ಪ, ವಿಮಲ ಶಿವಸ್ವಾಮಿ, ಶಿವಸ್ವಾಮಿ, ಎಂ.ಜಿ. ಸಿದ್ಧರಾಮಯ್ಯ ಇತರರು







ಬಳ್ಳಾರಿ : ಲಿಂ. ಡಾ. ಜೋಳದರಾಶಿ ದೊಡ್ಡನಗೌಡರ ದತ್ತಿ ಮತ್ತು ಲಿಂ. ಚನ್ನವೀರಗೌಡರ ದತ್ತಿ ಉಪನ್ಯಾಸ ಕಾರ್ಯಕ್ರಮ
ದಿನಾಂಕ:೧೦-೧೨-೨೦೨೧ ಚಿತ್ರದಲ್ಲಿ: ಜೋಳದರಾಶಿ ಕೆ. ಪಂಪನಗೌಡ, ಪಾರ್ವತಮ್ಮ, ರಾಜೇಶ್ವರಿ, ಡಾ. ತಿಪ್ಪೇರುದ್ರ ಸಂಡೂರು, ಯರ್‍ರಿಗೌಡ, ಡಾ. ಅಣ್ಣಾಜಿ ಕೃಷ್ಣಾರೆಡ್ಡಿ



ತುಮಕೂರು: ಮಾಕನಹಳ್ಳಿ ಹೆಚ್.ಎಂ. ರೇಣುಕಪ್ಪ ಹೆಚ್.ಸಿ. ನೀಲಾಂಬಿಕೆ ದತ್ತಿ ಕಾರ್ಯಕ್ರಮ, ದಿನಾಂಕ: ೨೧.೧೨.೨೦೨೧
ಚಿತ್ರದಲ್ಲಿ: ಪರಮಶಿವಯ್ಯ, ಮಹಾದೇವಮ್ಮ, ಎಂ.ಜಿ. ಸಿದ್ದರಾಮಯ್ಯ, ಈಶ್ವರಯ್ಯ ಹೊನ್ನೇಗೌಡ ರಾಜಶೇಖರಯ್ಯ ರಾಜಾ ರಾವ್, ದೈನಿಕ ರಾಜು, ಹಂಸಿ ಕುಮಾರಸ್ವಾಮಿ



ದಾವಣಗೆರೆ ಜಿಲ್ಲಾ ಕದಳಿ ಮಹಿಳಾ ವೇದಿಕೆ: ಲಿಂ.ಕಮಲ್ ಹೀರಾಬಾಯಿ ಮೂಲ್ಚಂದ್ ಚಾರಿಟಬಲ್ ಟ್ರಸ್ಟ್ ದತ್ತಿ ಮತ್ತು ಶ್ರೀಮತಿ ಭಾರತಿ ಹೆಚ್ ಬಸವಲಿಂಗಪ್ಪ ದತ್ತಿ ಹಾಗೂ ಲಿಂ. ಯಜಮಾನ್ ಮೋತಿ ಗೌರಮ್ಮ ದೊಡ್ಡಪ್ಪ ದತ್ತಿ ಉಪನ್ಯಾಸ,
ದಿನಾಂಕ:೨೯.೧೧.೨೧ ಚಿತ್ರದಲ್ಲಿ : ಬಸವರಾಜ್ ಹನುಮಲಿ, ಸುಮಾ ಎಂ.ಪಿ., ಜಿ.ಎಸ್. ಸೋಮಶೇಖರಪ್ಪ, ಎಂ. ಪೂಲ್ಚಂದ್ ಶಾ, ಅಂಬಾಲಾಲ್ ಜೈನ್, ಶಕುಂತಲಮ್ಮ, ಹೆಚ್.ಬಿ. ಕುಮಾರ್, ಮೋತಿ ನಿರ್ಮಲಮ್ಮ, ಆಶಾ ಎಂ. ಪಾಟೀಲ್

## ಕ್ಷೇತ್ರ ವಾರ್ತೆಗಳು



**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**
ದಿ:೩.೧೨.೨೦೨೧
ಪರಮಪೂಜ್ಯ ಜಗದ್ಗುರು
ಶ್ರೀ ಶಿವರಾತ್ರಿ ದೇಶಿಕೇಂದ್ರ
ಮಹಾಸ್ವಾಮಿಗಳವರು ಮತ್ತು
ಡಾ. ಗೊ.ರು. ಚನ್ನಬಸಪ್ಪನವರ
ಸಮ್ಮುಖದಲ್ಲಿ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ
ಅಧ್ಯಕ್ಷರಾಗಿ
ಪ್ರೊ. ಮಲೆಯೂರು ಗುರುಸ್ವಾಮಿ
ಆಯ್ಕೆ ಸಂದರ್ಭ



**ಮೈಸೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ ಮಹಿಳಾ ವೇದಿಕೆ**
**ಸದಸ್ಯ ರಿಷಿ ಶಿವಪ್ರಸನ್ನ ಅವರ ಕೃತಿ ಬಿಡುಗಡೆ ಮತ್ತು ಸನ್ಮಾನ ಕಾರ್ಯಕ್ರಮ**
ದಿನಾಂಕ:೧೧.೧೨.೨೦೨೧ ಸಾನ್ನಿಧ್ಯ: ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಚಿತ್ರದಲ್ಲಿ: ಹೆಳವರಹುಂಡಿ ಸಿದ್ದಪ್ಪ, ಪ್ರೊ. ಮಲೆಯೂರು ಗುರುಸ್ವಾಮಿ, ಡಾ. ಗೊ.ರು. ಚನ್ನಬಸಪ್ಪ, ರಿಷಿ ಶಿವಪ್ರಸನ್ನ ಬಿ.ಸಿ. ನಾಗೇಶ್, ಡಾ. ಯತೀಂದ್ರ ಸಿದ್ಧರಾಮಯ್ಯ, ಶಾರದಾ ಶಿವಲಿಂಗಸ್ವಾಮಿ, ಮ.ಗು. ಸದಾನಂದಯ್ಯ



**ಬೆಂಗಳೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು – ಜಿ.ಎಸ್. ನಿಜಲಿಂಗಪ್ಪನವರ ಸಂಸ್ಮರಣೆ**
ದಿನಾಂಕ:೧೦.೧೨.೨೦೨೧ ಚಿತ್ರದಲ್ಲಿ: ಡಾ.ಮುಖ್ಯಮಂತ್ರಿ ಚಂದ್ರು, ಡಾ.ಸಿಂ.ರಾ. ಹೊನ್ನಲಿಂಗಯ್ಯ ಯು.ಬಿ. ವೆಂಕಟೇಶ್, ಡಾ. ಗೊ.ರು. ಚನ್ನಬಸಪ್ಪ, ಎಸ್. ಮಹಾದೇವಯ್ಯ, ಡಾ. ಎಂ.ಪಿ. ನಾಡಗೌಡ ಕೆ.ವಿ. ನಾಗರಾಜಮೂರ್ತಿ

Magazine Registration No. RNI 68294/97
"REGISTERED" Postal Registration No. RNP/KA/BGS/167/2021-2023
Licensed to post without Pre Payment, License No:- PMG/BG/WPP/119/2021-2023
Posted at Registered News Paper Mailing Center, Bangalore P.S.O. Mysore Road-560 026 on 5th of every Month
MAHAAMANE Monthly Magazine
Date of Publication 1 January 2022
Total Pages 64 (Include Cover Pages)

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು




**ಕೆ.ಆರ್. ಲಿಂಗಪ್ಪ ಜಾನಪದ ಪ್ರಶಸ್ತಿ ಪ್ರದಾನ ಸಮಾರಂಭ – ೪.೧೨.೨೦೨೧**

ಸಾನ್ನಿಧ್ಯ: ಪೂಜ್ಯ ಶ್ರೀ ಮ.ನಿ.ಪ್ರ. ಗುರುಮಹಾಂತ ಮಹಾಸ್ವಾಮಿಗಳು, ಡಾ. ಶ್ರೀ ಚೆನ್ನಬಸವದೇವರು ನಂದವಾಡಗಿ
ಪ್ರಶಸ್ತಿ ಪುರಸ್ಕೃತರು: ತಿಮ್ಮಪ್ಪ ಧರಣಪ್ಪ ಮತ್ತು ಶರಣಪ್ಪ ಗೋನಾಳ
ಚಿತ್ರದಲ್ಲಿ: ವೀರಣ್ಣ ಬೆಳವಣಕಿ, ಎಸ್.ಬಿ. ಅಂಗಡಿ, ಪ್ರೊ. ಎಸ್.ಎನ್. ಹಾದಿಮನಿ, ಬಸವರಾಜ ನೆಲ್ಲಿಸರ
ಡಾ. ಗೊ.ರು. ಚನ್ನಬಸಪ್ಪ, ಸುನಿತಾ ಅಂಗಡಿ, ಸುಜಾತಾ ಅಂಗಡಿ, ಎ.ಎಸ್. ಪಾವಟೆ, ಕೊಂಡಜ್ಜಿ ಬ. ಷಣ್ಮುಖಪ್ಪ
ಎಸ್.ಎಂ. ಹಂಪಯ್ಯ, ಡಾ. ಸಂತೋಷ ಪೂಜಾರಿ, ಮಹಾಬಳೇಶ ಮರಟದ

34 ಡಾ. ಸಿ.ಸಿ. ಒಡೆಯರ
'ಶಿವಗಂಗಾ ನಿಲಯ', ಬನಶಂಕರಿ ನಗರ

Published by: Go.Ru. Channabasappa,
Akhila Bharatha Sharana Sahitya Parishat (Regd.)
...varathreeshwara Circle, 1st Main, 8th Block,
...Jayanagar, Bengaluru - 560 070
...d at : Sathyasri Printers Pvt Ltd., No. 16/1,
...ross, 2nd Main Road, Kasturiba Nagar
Bengaluru-560 026
Editor : Dr. M.S. Ashadevi